# ಅನನ್ಯ ಅಭಿವ್ಯಕ್ತಿ

ಸಂಪುಟ- 1 ಸಂಚಿಕೆ- 10 ಮೇ - 1999



ಈ ಸಂಚಿಕೆಯಲ್ಲಿ

# ಭರತಮುನಿಯ ನಾಟ್ಯಶಾಸ್ತ್ರ-9



## ಸಾಧಾರಣೀಕರಣ

**ಪ್ರೊ॥ ಸಾ.ಕೃ. ರಾಮಚಂದ್ರರಾವ್**

ರಸಾನುಭವದಲ್ಲಿ ಸಾಧಾರಣೀಕರಣದ ಪಾತ್ರವನ್ನು ಕುರಿತಂತೆ ಮೊಟ್ಟಮೊದಲಿಗೆ ತಿಳಿಯ ಹೇಳಿದ ಭಟ್ಟನಾಯಕನ ಅಭಿಪ್ರಾಯವನ್ನೆ ಪರಿಷ್ಕರಿಸಿ ಪ್ರತಿಪಾದಿಸಿದವನು ಅಭಿನವಗುಪ್ತ. ಭರತಮುನಿಯ ನಾಟ್ಯಶಾಸ್ತ್ರದಲ್ಲೇ (೭, ೯) ಇದರ ಧ್ವನಿಯಿದೆಯೆನ್ನಿ. ಭಟ್ಟನಾಯಕನು ತನಗೆ ಪೂರ್ವಸೂರಿಗಳಾಗಿದ್ದ ಭಟ್ಟಲೊಲ್ಲಟ ಮತ್ತು ಶಂಕುಕ ಇವರಿಬ್ಬರ ವಾದಗಳನ್ನು ವಿರೋಧಿಸಿಯೇ ಸಾಧಾರಣೀಕರಣವನ್ನು ಸೂಚಿಸಿದ್ದು. ಈ ಮೂರೂ ಮಂದಿ ಭರತಮುನಿಯ ರಸಸೂತ್ರವನ್ನು ವಿಭಿನ್ನವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅವರ ಗ್ರಂಥಗಳು ಯಾವುವೂ ಇಂದಿಗೆ ಉಪಲಬ್ಧವಿಲ್ಲ; ಅಭಿನವಗುಪ್ತನ ವಿವರಣೆಯಲ್ಲಿ ಈ ವಾದಗಳ ಉಲ್ಲೇಖ ಬಂದಿರುವುದೇ ನಮಗೆ ಆಧಾರ. ಲೊಲ್ಲಟನ ಪ್ರಕಾರ, ರಸನಿಷ್ಪತ್ತಿಯಾಗುವುದು ಪಾತ್ರದ ಪ್ರಭಾವದಿಂದಲೇ. ರಾಮನನ್ನು ಕುರಿತ ನಾಟಕದಲ್ಲಿ ಮೂಲಪಾತ್ರವಾದ ರಾಮನನ್ನೆ ರಸವು ಪ್ರಧಾನವಾಗಿ ಅವಲಂಬಿಸಿರುತ್ತದೆ; ಗೌಣವಾಗಿ ಆ ಪಾತ್ರಧಾರಿಯ ಕೌಶಲವನ್ನು ಅವಲಂಬಿಸಿರುತ್ತದೆ. ಶಂಕುಕನು ಈ ವಾದವನ್ನು ಅಲ್ಲಗಳೆದು, ಅನುಕೃತಿಯನ್ನು ಹೊಂದಿದ ರಸಿಕನ, ಸಹೃದಯನ ಮನೋವೃತ್ತಿಯೇ ರಸನಿಷ್ಪತ್ತಿಗೆ ಕಾರಣವೆಂದು ಹೇಳಿದ. ರಾಮನ ಪಾತ್ರವನ್ನು ಧರಿಸಿದ ನಟನು ರಾಮನ ಚಿತ್ತವೃತ್ತಿಯನ್ನೆ ಅನುಕರಿಸಿ ಅಭಿನಯಿಸಿದಾಗ, ಈ ಭಾವಾಭಿನಯದಿಂದ ಪ್ರೇಕ್ಷಕನ ಚಿತ್ತವೃತ್ತಿಯೂ ರಸಾನುಭವಕ್ಕೆ ಸಿದ್ಧವಾಗುತ್ತದೆ.

ಶಂಕುಕನ ವಾದದಲ್ಲೇ ಸಾಧಾರಣೀಕರಣದ ಬೀಜವನ್ನು ನಾವು ಕಾಣಬಹುದು. ಅವನು ಈ ಸಂದರ್ಭದಲ್ಲಿ ಚಿತ್ರಣಗೊಂಡ ಕುದುರೆಯ ನಿದರ್ಶನವನ್ನು ನೀಡುತ್ತಾನೆ. ಕುದುರೆಯ ಚಿತ್ರ ನೈಜವಾಗಿ, ರಸವತ್ತಾಗಿದ್ದರೆ ಅದು ದಿಟವಾಗಿ ಕುದುರೆಯೂ ಅಲ್ಲ, ಕುದುರೆಯೇ ಅಲ್ಲವೆನ್ನುವಂತೆಯೂ ಇಲ್ಲ. ಚಿತ್ರಣವು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಸತ್ಯ ಅಥವಾ ಅಸತ್ಯವೆಂದು ನಾವು ನಿರ್ಣಯಿಸಲು ನೆರವಾಗುವ, ಪೂರ್ವಸಿದ್ಧವಾದ ಸಾಮಗ್ರಿಯೇನೋ ಅಲ್ಲಿದೆ. ಪ್ರೇಕ್ಷಕನ ಮಾನಸಿಕ ಕಲ್ಪನೆಗೆ ಕಾರಣವಾಗುವ ಸಮರ್ಥರೂಪವನ್ನು ನಾವು ಅಲ್ಲಿ ಗುರುತಿಸಬಹುದು. ಅದು ಯಾವೊಂದು ನಿರ್ದಿಷ್ಟವಾದ (ಎಂದರೆ ನಾವು ದಿಟವಾಗಿ ಎಲ್ಲಿಯೋ ಎಂದೋ ನೋಡಿರಬಹುದಾದ) ಕುದುರೆಯಲ್ಲ. ಹಾಗೆ ಇರುವುದಾದರೆ ಸತ್ಯ ಅಥವಾ ಅಸತ್ಯ ಎಂದು ಹೇಳಬಹುದು. ಕುಶಲನಾದ ಚಿತ್ರಗಾರ ಬಿಡಿಸಿರುವುದು ಈ ಬಗೆಯ ನಿರ್ಣಯಕ್ಕೆ ಒಳಗಾಗಲಾರದು. ಅದು ಕುದುರೆಯೆ ಎಂದು ತಟ್ಟನೆ ಯಾರಾದರೂ ಹೇಳಬಹುದು. ಆದರೆ ಅದು ವಾಸ್ತವಿಕ ಜಗತ್ತಿನಲ್ಲಿ ಕಾಣಸಿಗುವ ಯಾವೊಂದು ಕುದುರೆಯೂ ಅಲ್ಲ. ಇದು 'ಸಾಧಾರಣೀಕೃತ' ಎಂಬ ಮಾತಿನ ಅರ್ಥ. ವ್ಯಕ್ತಿಗೆ ವಿಶಿಷ್ಟವಾದದ್ದಲ್ಲ; ಆ ಜಾತಿಯ ಯಾವ ವ್ಯಕ್ತಿಗಾದರೂ ಅನ್ವಯಿಸೀತು, ಎಂದು ತಾತ್ಪರ್ಯ.

**ಮುಖಪುಟದ ಚಿತ್ರ** : ಕನಕದಾಸರು. ಗಂಜೀಫಾ ರಘುಪತಿ ಭಟ್. ಕೃಪೆ : ಸಂಗೀತ ಸಭಾ, ಉಡುಪಿ

ಕಾವ್ಯದಲ್ಲಿ (ಅಥವಾ ನಾಟಕದಲ್ಲಿ) ರಸನಿಷ್ಪತ್ತಿಗೆ ಕಾರಣವಾಗುವುದು. ದೇಶ-ಕಾಲಗಳ ಕಟ್ಟುಪಾಡನ್ನು ಮೀರಿ, ರಸಿಕನ ಚಿತ್ತಭಿತ್ತಿಯಲ್ಲಿ ಒದಗುವ ಭಾವನಾವಿಶೇಷದಿಂದ ದಿನನಿತ್ಯದ ವ್ಯವಹಾರದ ಚೌಕಟ್ಟು ಇಲ್ಲಿಲ್ಲ; ಹೊರಗಣ ಭೌತವಸ್ತುಗಳಷ್ಟೆ ಸಾಮಗ್ರಿಯಿಂದ ರಸ ಎಂದಿಗೂ ಹೊರಹೊಮ್ಮಲಾರದು. ಸಾಮಾನ್ಯವಾಗಿ ನಡೆಯುವ ಕೆಲಸಗಳಲ್ಲಿ ಪ್ರಯೋಜನ ಮುಖ್ಯವಾಗುತ್ತದೆ; ಲೋಕದಲ್ಲಿ ಕಾಮವೋ ಅರ್ಥವೋ ಕೆಲಸಕ್ಕೆ ಕಾರಣವಾಗುತ್ತದೆ. ಆದರೆ ಕಲೆಯ ಹಂದರದಲ್ಲಿ ತೋರಿಕೊಳ್ಳುವ ವಿವರ ಈ ತೆರನಾದುದಲ್ಲ. ಅಲ್ಲಿಂದ ಲೌಕಿಕ ಪ್ರಯೋಜನ ದೂರ ಸರಿಯುತ್ತದೆ, ಹಿಂದೆಲ್ಲೋ ನಿಲ್ಲುತ್ತದೆ.

ಮುಂದೆ ರುಯ್ಯಕನು (ತನ್ನ ಅಲಂಕಾರಸರ್ವಸ್ವದಲ್ಲಿ) ಮಾಡಿದ ಸ್ವಭಾವೋಕ್ತಿ, ಭಾವಿಕ, ರಸವದ್ ಎನ್ನುವ ವಿಭಾಗ ಇಲ್ಲಿ ಸಂಗತವಾಗುತ್ತದೆ; ಸ್ವಭಾವೋಕ್ತಿಯಿಂದ ಹೊರಗಣ, ಭೌತಿಕ ವಸ್ತುಗಳ ನಿರೂಪಣೆ ಯಥಾವತ್ತಾಗಿ ಬರುತ್ತದೆ. ಇದು 'ವಸ್ತುಸಂವಾದ'ವೆನಿಸಿಕೊಳ್ಳುತ್ತದೆ. ಕಲೆಯ ಕೆಲಸ ಇಲ್ಲಿಲ್ಲ; ವ್ಯವಹಾರದ ಎಲ್ಲವೂ ನಡೆಯುವುದು ಹೀಗೆಯೇ. ಭಾವಿಕವೆಂದಾಗ ನಮ್ಮ ಭಾವನೆಗಳನ್ನು ಹೊರಹೊಮ್ಮಿಸುವ ಕೆಲಸ; ಹೊರಗಣ (ವಾಸ್ತವಿಕ) ವಿವರಗಳನ್ನು ತೋರಿಸುವುದಕ್ಕಿಂತ ಹೆಚ್ಚಾಗಿ ಈ ವಿವರಗಳು ನಮ್ಮ ಮನಸ್ಸಿನ ಮೇಲೆ ಯಾವ ಪ್ರಭಾವವನ್ನು ಹೇಗೆ ಮೂಡಿಸುತ್ತವೆ ಎಂಬುದು ಮುಖ್ಯವಾಗುತ್ತದೆ. ಇದನ್ನು 'ಚಿತ್ತವೃತ್ತಿಸಂವಾದ'ವೆಂದು ಕರೆಯುತ್ತಾರೆ. ಇದರಲ್ಲೇ ರಸದ ಪಾತ್ರ ಅಧಿಕವಾಗಿದ್ದಾಗ ಅದು 'ರಸವತ್' (ಎಂದರೆ ರಸವುಳ್ಳದ್ದು). ಇಲ್ಲಿ ನಡೆಯುವುದು ಸಾಧಾರಣೀಕರಣ. ಅದರಿಂದಲೇ ರಸ ಹೊರಹೊಮ್ಮುತ್ತದೆ. ಭಾವಿಕದಲ್ಲಿ ಇದು ಕಾಣಸಿಗುವುದಿಲ್ಲ. ಸ್ವಭಾವೋಕ್ತಿಯಲ್ಲಂತೂ ಇದರ ಸೊಲ್ಲೇ ಇಲ್ಲ; ಸಾಧ್ಯತೆಯೂ ಇರದು.

ರಸಾನುಭವವು ಭೋಜಕತ್ವ ವ್ಯಾಪಾರ ಎಂದು ಭಟ್ಟನಾಯಕನ ಎಣಿಕೆ. ಭೋಜಕತ್ವ ಎನ್ನುವ ಮಾತು ಉಣ್ಣುವುದು, ಅನುಭವಿಸುವುದು, ಸವಿಯುವುದು ಎಂಬರ್ಥಗಳನ್ನು ಸೂಚಿಸುತ್ತದೆ. ಕಲೆಯಲ್ಲಿ ರಸವು ಹೊರಹೊಮ್ಮಿದಾಗ ಅದನ್ನು ಆಸ್ವಾದಿಸುವುದು ಭೋಗವೆನಿಸಿಕೊಳ್ಳುತ್ತದೆ. ಭೋಗದಲ್ಲಿ ರಸಿಕನದ್ದೇ ಮುಖ್ಯ ವಿವರ; ಅವನನ್ನೆ ಭೋಜಕನೆಂದು ಗುರುತಿಸುತ್ತಾರೆ. ಅವನೇ ಸಹೃದಯ. ಭಟ್ಟನಾಯಕನ ಪ್ರಕಾರ ಸಹೃದಯನ ಭಾವಕತ್ವದಲ್ಲಿ (ಎಂದರೆ ಅವನು ಭಾವನೆಗಳನ್ನು ಹೊರಹೊಮ್ಮಿಸುವಲ್ಲಿ) ಸಾಧಾರಣೀಕರಣವೆಂಬುದು ನಡೆಯುತ್ತದೆ. ವಿಭವವೇ ಮೊದಲಾದ ಘಟಕಗಳನ್ನು ವಿಶೇಷವಾಗಿ ಗ್ರಹಣ ಮಾಡುತ್ತಿರುವಪ್ರೇಕ್ಷಕನೋಕಾವ್ಯಪ್ರೇಮಿಯೋಸಾಧಾರಣೀಕರಣವನ್ನು ಮಾಡಿಕೊಳ್ಳಬಲ್ಲ. ವಿಭವಾದಿಗಳಿಂದ ರಸನಿಷ್ಪತ್ತಿಯೆಂದು ರಸಸೂತ್ರ ಹೇಳುವಾಗ ಇದೊಂದು ವಿಶೇಷವಾದ ಚೌಕಟ್ಟೆಂದು (ಭಾವನೆ, ಭೋಗ, ಭೋಜಕತ್ವ) ಭಟ್ಟನಾಯಕನ ಅಭಿಪ್ರಾಯ.

ಆದರೆ ಸಾಧಾರಣೀಕರಣದ ಕೆಲಸದಲ್ಲಿ ಈ ಬಗೆಯ ಸಂಕೋಚವನ್ನು ಹೇರಬೇಕಾದ ಅಗತ್ಯವಿರದೆಂದು ಅಭಿನವಗುಪ್ತನ ವಾದ. ರಸಪ್ರತೀತಿಯನ್ನು ಮೀರಿ ಭೋಗ ಅಥವಾ ಭೋಜಕತ್ವ ಎಂಬ ವಿಶೇಷವನ್ನೇನೂ ಹೇಳಬೇಕಾಗಿಲ್ಲ. ಸಹೃದಯನಿಗಿರಬೇಕಾದುದು 'ವರ್ಣನೀಯ ವಸ್ತು ತನ್ಮಯೀಭವನ ಯೋಗ್ಯತೆ'ಯಷ್ಟೆ; ಕಾವ್ಯವಾಗಲಿ, ನಾಟಕವಾಗಲಿ ಯಾವುದನ್ನು ನಿರೂಪಿಸುವುದೋ, ತೋರಿಸುವುದೋ ಅದರೊಂದಿಗೆ ರಸಿಕನೋ ಪ್ರೇಕ್ಷಕನೋ ತನ್ನನ್ನು ತಾನು ಸಂಪೂರ್ಣವಾಗಿ ತೊಡಗಿಸಿಕೊಂಡು ಅದರಲ್ಲಿಯೇ ಬೆರೆತು ಒಂದಾಗಿಬಿಡುವ ಸಾಮರ್ಥ್ಯ ಇದ್ದರೆ ಆಯಿತು. ನಿತ್ಯಜೀವನದ ಯಾವ ವಿವರಕ್ಕೂ ಯಾವ ವ್ಯಕ್ತಿಗೂ ಇದರ ನಂಟಿರದಂತೆ ಅದನ್ನು ಲೋಕೋತ್ತರವನ್ನಾಗಿಸುವ ಸಾಮರ್ಥ್ಯ ಇದು. ಸಂಸಾರಕ್ಕೂ ಇದಕ್ಕೂ ಯಾವ ಸಂಬಂಧವಿಲ್ಲದಿರುವುದು ಇಲ್ಲಿನ ಸ್ವಾರಸ್ಯ.

ಭಟ್ಟನಾಯಕನು ತನ್ನ 'ಸಹೃದಯದರ್ಪಣ'ದಲ್ಲಿ ನಾಟ್ಯವು ಕೇವಲ ಕೋರಿಕೆಯದಾದರೂ (ಭಾಸಮಾನಮಪಿ), ಅದರ ಸ್ವರೂಪ ಬರಿಯ ಕಲ್ಪನೆಯೇ ಆದರೂ (ಕಲ್ಪನಾಮಾತ್ರಸಾರಂ), ಅದು

ಮನುಷ್ಯನ ಪ್ರಯೋಜನವನ್ನು ಸಾಧಿಸುವುದೆಂದು (ಪುಮರ್ಥೋಪಾಯತಾಮೇತಿ) ಹೇಳಿದ್ದನಂತೆ; ಅಭಿನವಗುಪ್ತನ ವಿವರಣೆಯಲ್ಲಿ ಇದು ಕಾಣಸಿಗುತ್ತದೆ. ಈ ಪ್ರಯೋಜನವಾದರೋ ಲೌಕಿಕವಾದುದಲ್ಲ, ಪಾರಮಾರ್ಥಿಕವಾದುದು. ಇದೇ ಭಟ್ಟನಾಯಕನ ಮಾತುಗಳಲ್ಲಿ 'ಲೋಕೋತ್ತರ ಪರಮಪುರುಷಾರ್ಥ' ಸಾಧಕವಾದ ಶಾಂತಿರಸ. ಉಳಿದ ರಸಗಳೆಲ್ಲ ಇದರ ಭೇದಗಳೇ. 'ಸ್ವಂ ಸ್ವಂ ನಿಮಿತ್ತಮಾದಾಯ ಶಾಂತಾದುತ್ಪದ್ಯತೇ ರಸಃ'. ಸಾಧಾರಣೀಕರಣದಿಂದ ಒದಗುವುದು ಈ ಬಗೆಯ ನೆಮ್ಮದಿಯ ಭಾವ; ಲೋಕದ ಯಾವ ಗೀಳಿಗೂ ಗೋಳಿಗೂ ಅಂಟಿಕೊಳ್ಳದೆ ಹಾಯಾಗಿರುವ ಸ್ಥಿತಿ. ಯಾವ ಬಯಕೆಯೂ ಅಲ್ಲಿರದು; ಯಾವ ಕೊರತೆಯೂ ಇರದು; ಹೀಗಿದ್ದರಲ್ಲದೆ ನೆಮ್ಮದಿ? ಇದು ಆಧ್ಯಾತ್ಮಿಕತೆಯ ನೆಲೆಯೆಂದೇ ಭಟ್ಟನಾಯಕನ ಸೂಚನೆ. ಅನಿತ್ಯವಾದ ಈ ನಾಮರೂಪಾತ್ಮಕ ಪ್ರಪಂಚವನ್ನು ಯೋಗಿಯು ಅಥವಾ ಸಾಧಕನು ಶ್ರವಣ, ಮನನ ಮೊದಲಾದ ಉಪಾಯಗಳಿಂದ ನಿಃಸಾರವೆಂದು, ದುಃಖಾತ್ಮಕವೆಂದು ಅರಿತುಕೊಂಡು ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವಂತೆಯೇ ಇಲ್ಲಿಯೂ ಸಹೃದಯನಾದ ಪ್ರೇಕ್ಷಕ ಅಥವಾ ರಸಿಕನು ಪರತತ್ತ್ವವನ್ನೇ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಕಾವ್ಯದಲ್ಲಿ ಅಥವಾ ನಾಟಕದಲ್ಲಿ ದೊರಕುವ ಆನಂದ ದಿಟವಾಗಿ ಬ್ರಹ್ಮಾನಂದವೇ ಎಂದು ಅವನ ವಾದ. ('ತಥಾ ತಾದೃಗೇವ ವಿಶ್ವಮಿದಂ ಅಸತ್ಯನಾಮರೂಪ ಪ್ರಪಂಚಾತ್ಮಕಂ ಅಥ ಚ ಶ್ರವಣಮನನಾದಿವಶೇನ ಪರಮಪುಮರ್ಥಪ್ರಾಪಕಮಿತಿ ಲೋಕೋತ್ತರ ಪರಮಪುರುಷಾರ್ಥ ಸೂಚನೇನ ಶಾಂತರಸೋಪಕ್ಷೇಪೋಽಯಂ ಭವಿಷ್ಯತಿ'). ಅದಕ್ಕಾಗಿಯೇ ಈ ಸೊಗಸಾದ ಒಂದು ಶ್ಲೋಕ ಪ್ರವೃತ್ತವಾಗಿರುವುದು -

***ಸಮಸ್ತ್ರೈಲೋಕ್ಯನಿರ್ಮಾಣಕವಯೇ ಶಂಭವೇ ಯತಃ ।***

***ಪ್ರತಿಕ್ಷಣಂ ಜಗನ್ನಾಟ್ಯಪ್ರಯೋಗರಸಿಕೋ ಜನಃ ॥***

ಶಿವನು ಮೂರೂ ಲೋಕಗಳನ್ನು ನಿರ್ಮಾಣಮಾಡಿದ ಕವಿಯೆಂಬುದು ದಿಟ; ಜಗತ್ತೆಂಬುದೇ ಒಂದು ಕಾವ್ಯ (ಅಥವಾ ನಾಟಕ). ಒಂದೊಂದು ಗಳಿಗೆಯಲ್ಲೂ ಈ ನಾಟಕದ (ಅಥವಾ ಕಾವ್ಯದ) ಸವಿಯನ್ನು ಅನುಭವಿಸಬಲ್ಲ ರಸಿಕನು ವಿಶ್ವನಿರ್ಮಾಣ ಚತುರ ಕವಿಯಾದ (ಅಥವಾ ನಟನಾದ) ಶಿವನೇ ಆಗುತ್ತಾನೆ. ಸೃಷ್ಟಿಯು ಲೀಲಾಕೈವಲ್ಯವಾಗಿರುವಂತೆಯೇ ಸಹೃದಯನ ರಸಾಸ್ವಾದನೆಯೂ ಕೂಡ. ರಸಾನುಭವಕ್ಕೂ ಬ್ರಹ್ಮಾನಂದಕ್ಕೂ ಭಟ್ಟನಾಯಕನ ದೃಷ್ಟಿಯಲ್ಲಿ ಅಂತರವೇನೂ ಇರದು. ಎರಡೂ ಚಿತ್ತದ ಬ್ರಹ್ಮಾಕಾರವೃತ್ತಿಗಳೇ.

ಅಭಿನವಗುಪ್ತನು ಇದನ್ನು ಒಪ್ಪುವುದಿಲ್ಲ. ರಸಾನುಭವದಲ್ಲಿ ಬ್ರಹ್ಮಾನಂದದ ತುಣುಕು ಇದ್ದೀತು, ಅರಿವು ಆದೀತು; ಎರಡರಲ್ಲೂ ಲೋಕೋತ್ತರವಾದ, ವ್ಯವಹಾರಾತೀತ ಪರಾತತ್ತ್ವದ ಅನುಭವವೂ ಆಗಬಹುದು. ಎರಡರ ನಡುವೆ ಸಾದೃಶ್ಯವಿದ್ದರೂ ಎರಡೂ ಒಂದೇ ಎನ್ನಲಾಗದು. ಬ್ರಹ್ಮಾನಂದದಲ್ಲಿ ಯೋಗಿಯ ದೇಶ-ಕಾಲ, ಪ್ರಕೃತಿ-ವಿಕಾರ, ಸುಖ-ದುಃಖ ಮುಂತಾದ ದ್ವಂದ್ವಗಳು ಎಲ್ಲವನ್ನೂ ದಾಟಿರುತ್ತವೆ. ಬದುಕಿನಿಂದಲೇ ಬೇರೆಯಾಗಿದ್ದುಕೊಂಡು, ಎಲ್ಲ ಚಿತ್ತವೃತ್ತಿಗಳಿಂದ ದೂರವಾಗಿ, 'ಸ್ವ-ಸ್ಥ'ನಾಗಿ (ತನ್ನಲ್ಲಿ ತಾನು) ಇರುತ್ತಾನೆ. ವ್ಯವಹಾರದ ಜೀವನ ಅವನ ನೆಮ್ಮದಿಯನ್ನೆಂದೂ ಕದಡುವುದಿಲ್ಲ. ರಸಾನುಭವ ಹೀಗಲ್ಲ. ತಾತ್ಕಾಲಿಕವಾದ ಆನಂದ ಅಲ್ಲಿ ಪ್ರಧಾನವಾಗಿದ್ದರೂ, ರಸಿಕನು ಬದುಕನ್ನೇನು ಮರೆಯಲಾರ; ವ್ಯವಹಾರದಿಂದ ದೂರವಾಗಿರುವುದು ಅವನಿಗೆ ಸಾಧ್ಯವಿಲ್ಲ. ಕಲೆಯು ನಿತ್ಯಜೀವನವನ್ನು ಬಿಡಲಾರದು. ದಿನನಿತ್ಯದ ಬದುಕಿನ ವಿವರಗಳೆಲ್ಲವೂ ರಸಿಕನ ಅರಿವಿನಲ್ಲಿ ಇದ್ದೇ ಇರುತ್ತವೆ; ಕೆಲವು ಮಾರ್ಪಡುವುದೇನೋ ಉಂಟು. ರಸಾನುಭವದ ಹೊತ್ತಿನಲ್ಲಿ ಅವನು ಲೋಕೋತ್ತರನಾಗಿರುವುದೇನೋ ದಿಟ. ಆದರೆ ಅದು ಕಳೆದೊಡನೆ ಲೋಕಕ್ಕೆ ಮರಳುತ್ತಾನೆ.

ಬ್ರಹ್ಮಾನಂದದಲ್ಲಿ ಯೋಗಿಯ ಅನುಭವ ವ್ಯಾಪಕವಾದುದು, ನಿರಂತರವಾದುದು; ಅದಕ್ಕೆ ಯಾವ

ಅಡೆ-ತಡೆಯೂ ಇಲ್ಲ. ಅದರಲ್ಲಿ ಏರು-ಪೇರುಗಳಿರವು. ಸಂಸಾರಕ್ಕೆ ಕಾರಣವಾದ ಅವಿದ್ಯೆಯು ಸಂಪೂರ್ಣವಾಗಿ ತೊಲಗಿ, ನಿತ್ಯನಿರಂತರವಾದ ಬ್ರಹ್ಮದ ಅರಿವು ದೃಢವಾಗಿ ಮೂಡಿರುವುದರಿಂದ ಅವನು ಎಂದೂ ತೃಪ್ತನೇ, ಉಪಶಾಂತನೇ. ಸಂಸಾರವೂ ಅವನ ಪಾಲಿಗೆ ನಿರ್ವಾಣವೇ, ಕೈವಲ್ಯವೇ. ಸಹೃದಯನಿಗೆ ಒದಗುವ ರಸಾನುಭವವಾದರೋ ಕ್ಷಣಿಕವಾದುದು. ಆ ಗಳಿಗೆಯಲ್ಲಿ ಅವನ ಆನಂದ ಲೋಕೋತ್ತರವಾದುದು; ಆಗ ಅವನು ತೃಪ್ತ, ಉಪಶಾಂತ. ಆ ಹೊತ್ತಿಗೆ ಮಾತ್ರ ಇದು ದಿಟ. ಆದರೆ ಆಗಲೂ ಲೋಕದ ನಂಟನ್ನೇನು ಅವನು ಕಳೆದುಕೊಂಡಿರುವುದಿಲ್ಲ. ಅವನ ಪಾಲಿಗೆ ಸಂಸಾರವೇನು ನಿರ್ವಾಣವಾಗಿರಲಾರದು. ಲೋಕದ ವಸ್ತುಗಳೂ ವ್ಯಾಪಾರಗಳೂ ಇದ್ದಂತೆಯೆ ಇರುತ್ತವೆ; ದೇಶ-ಕಾಲಗಳ ಚೌಕಟ್ಟೂ ಬದಲಾಗುವುದಿಲ್ಲ. ಆಗಿನ ಅನುಭವದಲ್ಲಿ ಮಾತ್ರ ಅವನು ನಿರ್ವೃತ. ಆದರೆ ಇದೂ ವಿಶಿಷ್ಟವಾದುದೇ. ಎಲ್ಲರಿಗೆ ದೊರಕುವಂಥದಲ್ಲ. ಎಡೆಬಿಡದ ಕಾವ್ಯಾನುಲೋಕನದಿಂದ ಸಂಸ್ಕಾರಗೊಂಡ ಒಡಲಿದ್ದರೆ ಮಾತ್ರ ಅವನು ಸಹೃದಯನಾದಾನು; ರಸಾನುಭವವನ್ನು ಪಡೆದುಕೊಂಡಾನು.

ಯೋಗಿಯ ಸಮಾಧಿಸ್ಥಿತಿಯೂ ರಸಿಕನ ರಸಾನುಭವವೂ ಒಂದೇ ತೆರನಾದುದು. ಎರಡರಲ್ಲೂ ವಿಷಯ-ವಿಷಯಿಗಳ ನಡುವೆ ಅಂತರ ಇರದು. ಎರಡಕ್ಕೂ ವ್ಯುತ್ಥಾನವೆಂಬ ದೆಶೆಯಿರುತ್ತದೆ. ಯೋಗಿ ಸಮಾಧಿ ಸ್ಥಿತಿಯಿಂದ ಎಚ್ಚರಗೊಂಡು ಸಾಮಾನ್ಯ ಬದುಕಿಗೆ ಮರಳುವಂತೆಯೇ, ರಸಿಕನೂ ರಸಾನುಭವದ ಗುಂಗು ಕಳೆದ ನಂತರ ಬರಡು ಬದುಕಿಗೆ ಮತ್ತೆ ಹೊರಳುತ್ತಾನೆ. ಅಭಿನವಗುಪ್ತನು ಮತ್ತೊಂದು ವ್ಯತ್ಯಾಸವನ್ನು ಕಾಣಿಸುತ್ತಾನೆ. ಯೋಗಿಯು ಸಮಾಧಿಯಲ್ಲಿ ತನ್ನನ್ನು ಮೀರಿದ, ತನಗೆ ಹೊರತಾದ ತತ್ತ್ವವೊಂದರಲ್ಲಿ (ಪರಮೇಶ್ವರನೆನ್ನಿ, ಬ್ರಹ್ಮನೆನ್ನಿ, ಕೇವಲವೆನ್ನಿ, ನಿರ್ವಾಣವೆನ್ನಿ) ಬೆರೆಯಲು ಹಾತೊರೆಯುತ್ತಾನೆ. ರಸಿಕನಿಗಾದರೆ ಇಂಥದೊಂದು ಹೊರಗಣ ವಿಷಯದ ಅಗತ್ಯವಿರದು. ರಸಾನುಭವಕ್ಕೆ ತನ್ನ ಒಡಲೇ ಸಾಕು; ಮತ್ತೊಂದು ವಸ್ತುವನ್ನು ಅರಸುವ ಹವಣಿಕೆ ಅಲ್ಲಿಲ್ಲ. ಈ ದೃಷ್ಟಿಯಿಂದ ರಸಾನುಭವ ಸ್ವಸಂಪೂರ್ಣ, ಸ್ವಾಯತ್ತ, ಸ್ವನಿಷ್ಠ, ಸ್ವತಂತ್ರ.

*(ಮುಂದುವರೆಯುವುದು)*

# ಬೃಹದ್ದೇಶೀ



ಟಿ.ಎಸ್. ಸತ್ಯವತಿ

*ಮಹಾಮಹೋಪಾಧ್ಯಾಯ ಡಾ|| ಆರ್. ಸತ್ಯನಾರಾಯಣ ಅವರ ಪೀಠಿಕೆ, ಪಠ್ಯಸಂಪಾದನ, ಕನ್ನಡ ಅನುವಾದ, ಪಾಠವಿಮರ್ಶೆ ಹಾಗೂ ಅನುಬಂಧಗಳನ್ನೊಳಗೊಂಡ ಮತಂಗನ 'ಬೃಹದ್ದೇಶೀ'ಯ ಪರಿಷ್ಕೃತ ಆವೃತ್ತಿಯನ್ನು ಇದೀಗ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದೆ. ಈ ಲೇಖನಕ್ಕೆ ಆಕರ ಸಾಮಗ್ರಿಯನ್ನೊದಗಿಸಿಕೊಟ್ಟ ಗ್ರಂಥಕರ್ತೃಗಳಿಗೆ ಆಭಾರಿಯಾಗಿದ್ದೇನೆ.*

ಐದು 'ಚೋಕ್ಷ', ಐದು 'ಭಿನ್ನ', ಮೂರು 'ಗೆಡ', ಎಂಟು 'ರಾಗ' (ವೇಸರ) ಏಳು 'ಸಾಧಾರಣ', ಹದಿನಾರು 'ಭಾಷಾ' ಮತ್ತು ಹನ್ನೆರಡು 'ವಿಭಾಷಾ' - ಹೀಗೆ ಒಟ್ಟು ರಾಗಗಳ ಸಂಖ್ಯೆ 56. ಈ ಎಲ್ಲ ರಾಗಗಳನ್ನು ಗ್ರಾಮಗಳಲ್ಲಿ ವಿಭಾಗಿಸಿ ಉಪಲಕ್ಷಿಸಿದ ಬಳಿಕ ಒಂದು ಪ್ರಮುಖ ಪ್ರಶ್ನೆಗೆ ಉತ್ತರ ಹೀಗಿದೆ: ಪ್ರಶ್ನೆ-ಗೀತ ಮತ್ತು ರಾಗಗಳಲ್ಲಿ ವ್ಯತ್ಯಾಸವೇನು ?

ಉತ್ತರ - ಹತ್ತು ಲಕ್ಷಣ (ಗ್ರಹಾಂಶನ್ಯಾಸವೇ ಮುಂತಾದ)ಗಳಿಂದ ನಿರ್ದಿಷ್ಟಗೊಂಡ ಗೀತವೇ 'ರಾಗ'ವಾಗುತ್ತದೆ. 'ಗೀತ'ವು ನಾಲ್ಕು ಅಂಗಗಳಿಂದ ಕೂಡಿರುತ್ತದೆ.

ಗಾನವಾಗಲೀ ವಾದ್ಯಸಂಗೀತವಾಗಲೀ ರೂಪಕಲೆಯ ಅವಿಭಾಜ್ಯ ಅಂಗವಾಗಿ ಬೆಸೆದುಕೊಂಡಿರುವುದನ್ನು ಮರೆಯದೆ ದಶರೂಪಕಗಳಲ್ಲಿ ರಾಗಗಳ ವಿನಿಯೋಗವನ್ನೂ ಪ್ರಸ್ತಾಪಿಸಲಾಗಿದೆ. ಅಂತೆಯೇ ಶುದ್ಧ (ಚೋಕ್ಷ)ವು 'ಪೂರ್ವರಂಗ'ದಲ್ಲಿ ಪ್ರಯುಕ್ತವಾದರೆ ಭಿನ್ನವು 'ಪ್ರಸ್ತಾವನಾ' ಭಾಗದಲ್ಲಿ ಪ್ರಯೋಗ ಹೊಂದುತ್ತದೆ. ಇನ್ನುಳಿದಂತೆ ಪಂಚಸಂಧಿಗಳಲ್ಲಿ ವೇಸರವನ್ನು 'ಮುಖ' 'ಪ್ರತಿಮುಖ' ಸಂಧಿಗಳಲ್ಲೂ ಗೌಡಿಯನ್ನು 'ಗರ್ಭಸಂಧಿ'ಯಲ್ಲೂ ಮತ್ತು ಸಾಧಾರಿತವನ್ನು 'ಅವಮರ್ಶ' ಹಾಗೂ 'ನಿರ್ವಹಣ' ಸಂಧಿಗಳಲ್ಲೂ ವಿಧಿಸಿದೆ.

*''ಗ್ರಾಮರಾಗೋದ್ಭವಾ ಭಾಷಾ ಭಾಷಾಭ್ಯಶ್ಚ ವಿಭಾಷಿಕಾಃ ।*

*ವಿಭಾಷಾಭ್ಯಶ್ಚ ಸಂಜಾತಾಸ್ತಥಾ ಚಾಂತರಭಾಷಿಕಾಃ ॥*

ಗ್ರಾಮರಾಗಗಳಿಂದ ಹುಟ್ಟಿದವು ಭಾಷಾರಾಗಗಳು. ಅವುಗಳಿಂದ ವಿಭಾಷಾ ಮತ್ತು ವಿಭಾಷಾ ರಾಗಗಳಿಂದ ಅಂತರಭಾಷಾರಾಗಗಳು ಜನಿಸಿವೆ.

ಎಪ್ಪತ್ತೈದು ಭಾಷಾರಾಗಗಳ ಲಕ್ಷಣವನ್ನು ಗಮನಿಸಿದಾಗ ಅಲ್ಲಿ ಉದಾಹರಣರೂಪವಾಗಿ ಕೊಟ್ಟಿರುವ ಸ್ವರಸಂಚಾರಗಳನ್ನು ಆ ಸ್ವರಗಳ ನಿರ್ದಿಷ್ಟ ಶ್ರುತಿಸ್ಥಾನಗಳ ಅರಿವಿದ್ದಲ್ಲಿ ಹಾಡಿಯೇ ಬಿಡಬಹುದೆನಿಸುತ್ತದೆ, ನೋಡಿ:

*ಟಕ್ಕ ಜನ್ಯ ಭಾಷಾ ರಾಗವಾದ 'ಸೌರಾಷ್ಟ್ರೀ'ಯ ಲಕ್ಷಣ ಹೀಗಿದೆ*

*''ನಿಷಾದಾಂಶಾ ತು ಷಡ್ಜಾಂತಾ ಸಂಪೂರ್ಣಾ ನಿತ್ಯಮೇವ ಹಿ ।*

*ಸೌರಾಷ್ಟ್ರಿಕಾ ತು ಭಾಷೇಯಂ ದೇಶಾಖ್ಯಾ ಗೀಯತೇ ಜನೈಃ ॥*

ನಿಷಾದವನ್ನು ಅಂಶವಾಗಿಯೂ ಷಡ್ಜವನ್ನು ನ್ಯಾಸವಾಗಿಯೂ ಹೊಂದಿದೆ. ಯಾವಾಗಲೂ ಸಂಪೂರ್ಣವಾಗಿಯೇ ಇರುತ್ತದೆ. (ಸಂಪೂರ್ಣವೆಂದರೆ ಸಪ್ತಸ್ವರಗಳೂ ಆರೋಹಾವರೋಹಗಳಲ್ಲಿ ಇರಬೇಕೆಂಬ ನಿಯಮವಿರುವಂತೆ ಕಾಣುವುದಿಲ್ಲ. ಲಕ್ಷಣದ ಕೊನೆಯಲ್ಲಿ ಕೊಟ್ಟಿರುವ ಸ್ವರಗಳಿಂದ

ಸರಿಗಮದನಿಸ-ಸನಿದಮಗಸ ಎಂಬ ಆರೋಹಣ ಅವರೋಹಣ ಕ್ರಮವಿರುವುದು ಸ್ಪಷ್ಟವಾಗಿದೆ.) ಸೌರಾಷ್ಟ್ರ ದೇಶದ ಹೆಸರಿನಲ್ಲಿ ಜನರು ಈ ರಾಗವನ್ನು ಹಾಡುತ್ತಾರೆ.

**ನಿನಿದಾನಿನಿಸಾಸಾ ನಿರಿಗಾಸಾಸಾ ಸಾಗಾಗಾಸಾ ದನಿನಿನಿ ।**
**ದಾಮಾಮಾನಿನಿ ನಿನಿದಾ ಸಾಸಾ ಗಾಸಾಸಾ ಗಾಸಾಸ ದಾನಿದಾಮಾಮಾಮಾರಿಗಾಸಾಸಾ ಗಾಸನೀಸಾಸಾಸಾ ।**

ಷಡ್ಜಗ್ರಾಮ ಮಧ್ಯಮಗ್ರಾಮಗಳ ಮೂರ್ಛನೆಗಳ ಜ್ಞಾನವೇ ಖಚಿತವಾಗಿಲ್ಲದ ಸದ್ಯದ ಸ್ಥಿತಿಯಲ್ಲಿ ಈ ಸ್ವರಗಳನ್ನು ಹಾಡಲಾಗುವುದಿಲ್ಲವೆಂದು ವಿಷಾದಪಡಬೇಕಾಗಿದೆ. ಆದರೆ ರಾಗಗಳು ವಿಕಾಸಗೊಂಡ ರೀತಿಯನ್ನು ಅರಿಯುವಲ್ಲಿ ಮಹತ್ವಪೂರ್ಣವಾದ ಸಾಧನ ಮತಂಗನ ಬೃಹದ್ದೇಶಿಯಲ್ಲಿನ ಈ 'ಭಾಷಾಧ್ಯಾಯ' ಎಂದು ಮಾತ್ರ ನಿಸ್ಸಂದೇಹವಾಗಿ ಹೇಳಬಹುದು.

'ದೇಶೀರಾಗಾಧ್ಯಾಯ'ವೆಂಬ ಸ್ವತಂತ್ರವಾದೊಂದು ಅಧ್ಯಾಯವು ದೇಶೀರಾಗಗಳ ನಿರೂಪಣೆಗಾಗಿಯೇ ಮೀಸಲಿದ್ದರೂ ಭಾಷಾಧ್ಯಾಯದಲ್ಲೇ ಆಯಾ ದೇಶ ಜನ್ಯವಾದ ಅನೇಕ ರಾಗಗಳ ಉಲ್ಲೇಖವಿದೆ. ಗುರ್ಜರೀ, ಸೌರಾಷ್ಟ್ರೀ, ಸೈಂಧವೀ, ಆಭೀರೀ, ಬಾಂಗಾಲೀ, ಕಾಂಬೋಜಾ, ದಾಕ್ಷಿಣಾತ್ಯಾ, ಗಾಂಧಾರೀ, ಪುಲಿಂದೀ, ಸೌವೀರೀ, ವಿಶಾಲಾ, ದ್ರಾವಿಡೀ, ಕಲಿಂಗಾ... ಹೀಗೆ ಪ್ರತ್ಯೇಕ ಪ್ರದೇಶೋದ್ಭವ ರಾಗಗಳು ಹಲವಾರು.

ಮತಂಗನು ತನಗಿಂತಲೂ ಹಿಂದಿದ್ದ ಪೂರ್ವಾಚಾರ್ಯರಾದ ಯಾಷ್ಟಿಕ ಮತ್ತು ಶಾರ್ದೂಲರಿಬ್ಬರ ಮತಾನುಸಾರವಾಗಿ ಭಾಷಾ ರಾಗಗಳ ವಿವರಗಳನ್ನು ನೀಡಿದ್ದಾನೆ. ಇದರಲ್ಲಿ ಒಂದೇ ಹೆಸರಿನ ಬೇರೆ ಬೇರೆ ಲಕ್ಷಣಗಳುಳ್ಳ ರಾಗಗಳೂ ಇರುವುದು ಗಮನಾರ್ಹ. ಉದಾ : 'ಆಭೀರೀ' ರಾಗವು ಯಾಷ್ಟಿಕನ ಮತಾನುಸಾರವಾಗಿಯೇ ಒಮ್ಮೆ ಮಾಲವಕೈಶಿಕಜನ್ಯಭಾಷಾರಾಗವಾಗಿಯೂ ಮತ್ತೊಮ್ಮೆ ಪಂಚಮಜನ್ಯ ಭಾಷಾರಾಗವಾಗಿಯೂ ಉಲ್ಲೇಖಗೊಂಡಿದೆ.

ಐದನೆಯದಾದ 'ದೇಶೀರಾಗಾಧ್ಯಾಯ'ವು ಅತ್ಯಂತ ಸಂಕ್ಷೇಪವಾಗಿದೆ. ದೇಶೀರಾಗಗಳನ್ನು ರಾಗಾಂಗ, ಭಾಷಾಂಗ ಮತ್ತು ಕ್ರಿಯಾಂಗವೆಂದು ಮೂರು ಬಗೆಯಾಗಿ ಹೇಳಿದೆ.

ಗ್ರಾಮ ರಾಗಗಳ ಛಾಯೆಯನ್ನು ಮಾತ್ರ ಹೊಂದಿರುವುವು 'ರಾಗಾಂಗ'ಗಳು. ಭಾಷಾಂಗರಾಗಗಳ ಛಾಯೆಯನ್ನು ಮಾತ್ರ ಪಡೆದಿರುವ ರಾಗಗಳು 'ಭಾಷಾಂಗ'ಗಳು. ಯಾವ ರಾಗಗಳಿಂದ ಕರುಣ, ಉತ್ಸಾಹ, ಶೋಕ ಮುಂತಾದ ಭಾವಕ್ರಿಯೆಗಳು ಉಂಟಾಗುವುದೋ ಅಂಥಹವು 'ಕ್ರಿಯಾಂಗ'ಗಳೆನಿಸುತ್ತವೆ.

ಕಚ್ಛೇಲ್ಲೀ, ಶ್ವಸಿತಾ, ಮಾಂಗಾಲೀ, ಭಮ್ಮಾಣಿಕಾ, ಪುಲಿಂದಿಕಾ, ಗಾಂಧಾರಸಿಂಧು ಮತ್ತು ಕರ್ಣಾಟೀ ಎಂಬ ಏಳು ರಾಗಗಳನ್ನು ಈ ದೇಶೀ ರಾಗಾಧ್ಯಾಯದಲ್ಲಿ ಲಕ್ಷಣ ಸಹಿತವಾಗಿ ಉಲ್ಲೇಖಿಸಿದ್ದರೂ ಪ್ರಯೋಗಕ್ಕೆ ಅನುವಾಗುವ ಸ್ವರಗುಚ್ಛಗಳನ್ನು ಕಾಣಿಸಿಲ್ಲ.

ಈ ಅಧ್ಯಾಯದ ಆರಂಭದಲ್ಲಿ ಬರುವ ಸ್ರಗ್ಧರಾ ವೃತ್ತದಲ್ಲಿ ರಚಿತವಾಗಿರುವ ದೇವೀಸ್ತುತಿ ಬಹಳ ಮನೋಹರವಾಗಿದೆ.

*''ಬಂಧೂಕಾಂಭಾಂ ತ್ರಿನೇತ್ರಾಮಮೃತಕರಕಲಾಶೇಖರಾಂ ರಕ್ತವಸ್ತ್ರಾಂ*
*ಪೀನೋತ್ತುಂಗಪ್ರವೃತ್ತಸ್ತನಭರನಮಿತಾಂ ಯೌವನಾರಂಭರೂಢಾಮ್ ।*
*ಸರ್ವಾಲಂಕಾರಭೂಷಾಂ ಸರಸಿಜನಿಲಯಾಂ ಬೀಜಸಂಕ್ರಾಂತಮೂರ್ತಿಂ*
*ದೇವೀಂ ಪಾಶಾಂಕುಶಾಢ್ಯಾಮಭಯವರಕರಾಂ ವಿಶ್ವಯೋನಿಂ ನಮಾಮಿ ॥*

(ಮುಂದುವರಿಯುವುದು)

# ಸಂಗೀತ ಸರಿತಾ

ಎಸ್. ಕೃಷ್ಣಮೂರ್ತಿ

## ಸಂಗೀತ ಸ್ಪರ್ಧೆ-೩

ಕುಸುಮ,

ಕೇಶವಯ್ಯನವರ ಪ್ರತಾಪದ ಕತೆ ಕೇಳಿ ಶಾಸ್ತ್ರಿಗಳಿಗೂ ಕಳವಳವುಂಟಾಗಿತ್ತು. ''ದೇವೀ ಬ್ರೋವ ಸಮಯವಿದೆ'' ಎಂಬ ಕೀರ್ತನೆಯನ್ನು ರಚಿಸಿ, ದೇವಿಗೆ ಸಮರ್ಪಿಸಿ ತಮ್ಮ ಮನಸ್ಸಿನ ಆತಂಕವನ್ನು ತಾಯಿಯಲ್ಲಿ ತೋಡಿಕೊಂಡರು. ಈ ಕೀರ್ತನೆ ಚಿಂತಾಮಣಿ ರಾಗ, ಆದಿ ತಾಳದಲ್ಲಿದೆ. ಚಿಂತಾಮಣಿ ರಾಗದಲ್ಲಿ ಬೇರೆ ಯಾರೂ ರಚನೆಗಳನ್ನು ಮಾಡಿರುವಂತೆ ಕಂಡುಬಂದಿಲ್ಲ. ದೇವಿ ಸುಪ್ರೀತಳಾದಳು. ಶಾಸ್ತ್ರಿಗಳಿಗೆ ಶುಭ ಸೂಚನೆಗಳಾದವು. ಧೈರ್ಯ ಉತ್ಸಾಹ ತುಂಬಿ ಬಂದವು.

ಶ್ಯಾಮಶಾಸ್ತ್ರಿಗಳು ಕೇಶವಯ್ಯನವರ ಸವಾಲನ್ನು ಎದುರಿಸಲು ಒಪ್ಪಿದ್ದಾರೆ ಎಂಬ ಸುದ್ದಿ ಕ್ಷಣಾರ್ಧದಲ್ಲಿ ಊರಲ್ಲೆಲ್ಲ ಹಬ್ಬಿತು. ಮೂಲೆ ಮೂಲೆಗಳಿಂದ ವಿದ್ವಾಂಸರೂ ರಸಿಕರೂ ಬಂದು ಸೇರಿದರು.

ದೇವಿಯ ಪ್ರಸಾದ ರೂಪವಾದ ಕುಂಕುಮವನ್ನು ಹಣೆಗಿಟ್ಟು ಶಾಸ್ತ್ರಿಗಳು ಅಭಿನವ ಪರಮೇಶ್ವರನಂತೆ ಅರಮನೆಗೆ ಆಗಮಿಸಿದಾಗ ಜನ ಹರ್ಷೋದ್ಗಾರ ಮಾಡಿದರು. ಗಂಭೀರವಾಗಿ ಹೆಜ್ಜೆಯಿಡುತ್ತ ಬಂದು ಶಾಸ್ತ್ರಿಗಳು ಕೇಶವಯ್ಯನವರೆದುರು ಕುಳಿತರು. ಸೂಜಿ ಬಿದ್ದರೆ ಕೇಳಿಸುವಷ್ಟು ಮೌನ ಸಭೆಯಲ್ಲಿ. ಮುಂದೆ ಏನೋ ಎಂತೋ ಎಂದು ಎಲ್ಲರೂ ಉಸಿರನ್ನು ಬಿಗಿ ಹಿಡಿದಿದ್ದರು. ಸಂಸ್ಥಾನದ ಗೌರವ ಪ್ರತಿಷ್ಠೆಗಳನ್ನು ಕಾಪಾಡಲು ಆಗಮಿಸಿದ್ದ ಶಾಸ್ತ್ರಿಗಳನ್ನೇ ಎವೆಯಿಕ್ಕದೆ ನೋಡುತ್ತ ಕುಳಿತರು, ಪ್ರಭುಗಳು. ವಿಜಯಶಾಲಿಗಳಾಗುವ ವಿದ್ವಾಂಸರಿಗೆಂದು ಮೀಸಲಾದ ಬೆಲೆ ಬಾಳುವ ಬಹುಮಾನಗಳು ಪ್ರಭುಗಳ ಬಳಿಯಿದ್ದ ರಜತಪರಾತದಲ್ಲಿ ಕಂಗೊಳಿಸುತ್ತಿದ್ದುವು.

ಸ್ಪರ್ಧೆ ಪ್ರಾರಂಭವಾಗಬಹುದು ಎಂಬ ಸೂಚನೆ ಬಂದೊಡನೆಯೇ ಕೇಶವಯ್ಯ ತಮಗೆ ಸಿದ್ಧವಾದ ರಾಗವೊಂದನ್ನೆತ್ತಿಕೊಂಡು ಆಲಾಪನೆ ಮಾಡಿ, ತಾನ ವಿನ್ಯಾಸ ಮಾಡಿದರು. ಕಲ್ಪನಾ ಸಂಗೀತ ವಿಭಾಗದಲ್ಲಿ ಅವರದು ಅಸಾಧಾರಣ ಪಾಂಡಿತ್ಯ. ಚಿತ್ರ ವಿಚಿತ್ರ ರೀತಿಯಲ್ಲಿ ವಿವಿಧ ''ಚೌಕ'' ''ಗತಿ''ಗಳಲ್ಲಿ ತಾನಗಳನ್ನು ಹಾಡಿ ಜಯಭೇರಿಯನ್ನು ಹೊಡೆಯಲು ಸರ್ವ ಪ್ರಯತ್ನ ಮಾಡಿ ಕೇಶವಯ್ಯ ತಮ್ಮ ಗಾಯನವನ್ನು ನಿಲ್ಲಿಸಿದರು. ಕೇಶವಯ್ಯನವರ ಆರ್ಭಟ ಶಾಸ್ತ್ರಿಗಳ ಮನಸ್ಥೈರ್ಯವನ್ನು ಎಳ್ಳಷ್ಟೂ ಕದಡಲಿಲ್ಲ. ಶಾಂತಚಿತ್ತರಾಗಿಯೇ ಕೇಳಿದರು : ''ಆಯಿತೋ ನಿಮ್ಮ ಅಬ್ಬರವೆಲ್ಲ, ಇನ್ನೂ ಇದೆಯೋ?'' ಎಂದು. ಕೇಶವಯ್ಯ ಅದನ್ನು ನಿರೀಕ್ಷಿಸಿರಲಿಲ್ಲ. ತಮ್ಮ ಸೋಲನ್ನು ಒಪ್ಪಿ ಶಾಸ್ತ್ರಿಗಳು ದೀರ್ಘದಂಡ ಪ್ರಣಾಮ ಮಾಡಿಯೇತೀರುತ್ತಾರೆ ಎಂತಲೇ ಎಣಿಸಿದ್ದರು. ಶಾಸ್ತ್ರಿಗಳ ಈ ಪ್ರಶ್ನೆ ಸಿಡಿಲಿನಂತೆರಗಿತು ಅವರಿಗೆ !

ಶಾಸ್ತ್ರಿಗಳ ಗಾಯನ ಮೊದಲಾಯಿತು. ಕೇಶವಯ್ಯ ಕಂಡರಿಯದ ನೂರಾರು ಪ್ರಯೋಗಗಳನ್ನು ಹಾಡಿ ತೋರಿಸಿದರು. ಕಣ್ಣು ಬಾಯಿಬಿಡುವಂತಾಯಿತು ಕೇಶವಯ್ಯನವರಿಗೆ.

ಕೇಶವಯ್ಯ ಸಾಮಾನ್ಯ ವಿದ್ವಾಂಸರೇನೂ ಅಲ್ಲ. ಇಬ್ಬರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂದು ತೀರ್ಮಾನಿಸುವುದೇ ಶ್ರಮಸಾಧ್ಯವಾಯಿತು. ಸ್ಪರ್ಧೆಯನ್ನು ಒಂದು ಘಟ್ಟಕ್ಕೆ ತಂದು ನಿಲ್ಲಿಸುವ ಬಗೆ ಯಾವುದು ಎಂಬುದೇ ಒಂದು ಸಮಸ್ಯೆಯಾಯಿತು. ಇಬ್ಬರು ವಿದ್ವಾಂಸರೂ ಒಬ್ಬರನ್ನೊಬ್ಬರು ಒಂದರಮೇಲೊಂದರಂತೆ ಮೂರು ಮೂರು ಪ್ರಶ್ನೆಗಳನ್ನು ಕೇಳುವುದು; ಅವುಗಳ ಫಲಿತಾಂಶದ ಮೇಲೆ ಸ್ಪರ್ಧೆಯನ್ನು ನಿರ್ಣಯಿಸುವುದು ಎಂಬ ಸಲಹೆಯನ್ನು ವಿದ್ವಾಂಸರಿಬ್ಬರೂ ಒಪ್ಪಿಕೊಂಡರು. ಪ್ರಶ್ನೆ ಮಾಲಿಕೆಯನ್ನು ಶಾಸ್ತ್ರಿಗಳೇ ಪ್ರಾರಂಭಮಾಡತಕ್ಕದ್ದು ಎಂದೂ ತೀರ್ಮಾನವಾಯಿತು.

''ಶಾಸ್ತ್ರಗಳಲ್ಲಿ ಉಕ್ತವಾಗಿರುವ ನಿಯಮಗಳಿಗನುಸಾರವಾಗಿ ಹಾಡಬಲ್ಲಿರಾ?'' ಕೇಶವಯ್ಯನವರನ್ನು ಪ್ರಶ್ನಿಸಿದರು ಶಾಸ್ತ್ರಿಗಳು.

ಎಂತಹ ಘನ ವಿದ್ವಾಂಸರಿಗೆ ಎಂತಹ ಸರಳ ಪ್ರಶ್ನೆ ಎಂದು ಸಭೆ ಮೂಗಿನ ಮೇಲೆ ಬೆರಳಿಟ್ಟಿತು.

ಉತ್ತರ ನೀಡುವ ಸಮಾಧಾನವೂ ಕೇಶವಯ್ಯನವರಲ್ಲಿ ಉಳಿದಿರಲಿಲ್ಲ. ನಿಮ್ಮ ಸವಾಲು ನನಗೆ ತೃಣಪ್ರಾಯ ಎಂಬ ಅರ್ಥಬರುವಂತೆ ತಲೆಯನ್ನಾಡಿಸಿದರು ಕೇಶವಯ್ಯ ಮುಖ ಮುದುರಿಕೊಂಡು.

''ಹಾಗಾದರೆ ಪ್ರತಿಮೆಯಂತೆ ಅಚಲವಾಗಿ ಕುಳಿತು ಅಂಗಾಂಗಗಳ ಚಲನವಲನವಿಲ್ಲದಂತೆ ಸ್ವಲ್ಪಕಾಲ ತಾನ ವಿನ್ಯಾಸಮಾಡಿ'' ಎಂದರು ಶಾಸ್ತ್ರಿಗಳು.

ತಲೆಯನ್ನೂ ಮೈಕೈಗಳನ್ನೂ ಮನಸ್ಸಿಗೆ ಬಂದ ಹಾಗೆ ಕುಣಿಸಿಕೊಂಡು ಹಾಡುವುದು ಗಾಯಕದೋಷಗಳು ಎಂಬುದು ಶಾಸ್ತ್ರವಾಕ್ಯ.

ಕೇಶವಯ್ಯನವರಿಗೆ ಇದು ಕಷ್ಟಕ್ಕಿಟ್ಟುಕೊಂಡಿತು. ಮುಖ ಕಿರಿದಾಯಿತು.

ಮುಂದೆ ಕೇಶವಯ್ಯನವರ ಸರದಿ. ಸಿಂಹನಂದನ ತಾಳದಲ್ಲಿ ಒಂದು ಪಲ್ಲವಿಯನ್ನು ಹಾಡಿ ''ಪಲ್ಲವಿಯನ್ನು ಮುಂದುವರಿಸಿ'' ಎಂದು ಹೇಳಿದರು. ತಾಳದಲ್ಲಿ ನಿಸ್ಸೀಮರಾದ ಶಾಸ್ತ್ರಿಗಳನ್ನು ಕೇಳಬೇಕೆ? ನೀರು ಕುಡಿದ ಹಾಗೆ ಹಾಡಿ ಮುಗಿಸಿದರು. ನೂರೆಂಟು ತಾಳಗಳಲ್ಲೇ ಅತಿ ದೊಡ್ಡ ತಾಳ ಇದು, ಕುಸುಮ. ಒಂದು ಆವರ್ತಕ್ಕೆ ೩೨ ಮಾತ್ರೆಗಳು ಅಥರಾ ೧೨೮ ಅಕ್ಷರ ಕಾಲ !

ಮತ್ತೆ ಶಾಸ್ತ್ರಿಗಳ ಸರದಿ ಬಂದಿತು. ಶರಭನಂದನ ತಾಳದಲ್ಲಿ ಒಂದು ಪಲ್ಲವಿಯನ್ನು ಹಾಡಿ ಕೇಶವಯ್ಯನವರ ಕಡೆಗೆ ನೋಡಿದರು. ಅದರ ತಲೆ ಬಾಲ ಯಾವುದೂ ಅರ್ಥವಾಗಲಿಲ್ಲ ಕೇಶವಯ್ಯನವರಿಗೆ. ಶರಭನಂದನ ತಾಳವನ್ನು ರಚಿಸಿದವರೇ ಶಾಸ್ತ್ರಿಗಳು. ಒಂದು ಆವರ್ತಕ್ಕೆ ೧೯ ಮುಕ್ಕಾಲು ಮಾತ್ರೆಗಳು ಅಥವಾ ೭೯ ಅಕ್ಷರ ಕಾಲ ಇರುತ್ತವೆ ಈ ತಾಳದಲ್ಲಿ. ೨೪ ಅಂಗಗಳು ಮಾತ್ರ ಈ ತಾಳಕ್ಕೆ ! ತಾಳದ ಎಣಿಕೆಗಳನ್ನು ನೋಡಿಯೇ ಬೆಪ್ಪಾಗಿ ಬೆರಗಾದರು ಕೇಶವಯ್ಯ ! ಅವರ ಅಹಂಕಾರ ಅಡಗಿದಂತಾಯಿತು. ಮಹಾರಾಜರು ಶಾಸ್ತ್ರಿಗಳಮೇಲೆ ಪಾರಿತೋಷಕದ ಮಳೆಗರೆದರು. ಆಸ್ಥಾನದ ವಿದ್ವಾಂಸರು ಕೃತಜ್ಞತೆಯಿಂದ ತಲೆತಗ್ಗಿಸಿದರು. ಕೇಶವಯ್ಯನವರ ಪಾಂಡಿತ್ಯವನ್ನು ಮೆಚ್ಚಿ ಅವರಿಗೂ ತಾಮ್ರಪತ್ರವನ್ನಿತ್ತು ಗೌರವಿಸಿದರು ದೊರೆ.

ಅರಮನೆಯಿಂದ ಹೊರಬೀಳುತ್ತ ''ನನ್ನ ಪರಾಭವಕ್ಕೆಲ್ಲ ನೀವೇ ಕಾರಣ'' ಎಂದರಂತೆ ಶಾಸ್ತ್ರಿಗಳನ್ನು ಕುರಿತು ಕೇಶವಯ್ಯ ಹಲ್ಲುಮುಡಿಕಚ್ಚುತ್ತ. ''ಮಾಡಿದ್ದುಣ್ಣೋ ಮಾರಾಯ'' ಎಂದರಂತೆ ಶಾಸ್ತ್ರಿಗಳು ನಸುನಗುತ್ತ!

## ಸಂಗೀತ ಸ್ಪರ್ಧೆ-೫

ಕುಸುಮ,

ಬಿಡಾರಂ ಕೃಷ್ಣಪ್ಪನವರನ್ನು ಸತ್ಕರಿಸಲು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಒಂದು ಸಂಗೀತ ಸಭೆಯಲ್ಲಿ ''ಮಹಾವಿದ್ವಾಂಸ''ರೆಂಬ ಗೌರವ ಪ್ರಶಸ್ತಿಯನ್ನು ಅವರಿಗೆ ನೀಡಲಾಯಿತು. ಕೃಷ್ಣಪ್ಪನವರು ಬೆಂಗಳೂರಿನಿಂದ ಹಿಂತಿರುಗುವಷ್ಟರಲ್ಲಿ ಈ ಸುದ್ದಿ ಮೈಸೂರಿಗೆ ತಲುಪಿತ್ತು. ತಮ್ಮ ಮನೆಗೆ ಬರುವಂತೆ ಕೃಷ್ಣಪ್ಪನವರಿಗೆ ಹೇಳಿಕಳುಹಿಸಿದರು ವೀಣೆ ಶೇಷಣ್ಣ. ಶೇಷಣ್ಣನವರೆಂದರೆ ಕೃಷ್ಣಪ್ಪನವರಿಗೆ ಗುರುಸ್ವರೂಪರು. ಒಡನೆಯೇ ಹೊರಟುಬಂದರು ಕೃಷ್ಣಪ್ಪ.

ಶೇಷಣ್ಣನವರ ಮನೆಯಲ್ಲಿ ಆ ವೇಳೆಗಾಗಲೇ ಒಂದು ದೊಡ್ಡ ಸಭೆ ಸೇರಿತ್ತು. ಕೃಷ್ಣಪ್ಪನವರಿಗೆ ಇದರ ಅರ್ಥವಾಗಲಿಲ್ಲ. ''ಕೃಷ್ಣಪ್ಪ, ಬೆಂಗಳೂರಿನಲ್ಲಿ ನಡೆದ ಸಮಾಚಾರವೆಲ್ಲ ತಿಳಿಯಿತು. ''ಮಹಾ

ವಿದ್ವಾಂಸ'' ಎನ್ನುವ ಪ್ರಶಸ್ತಿಯನ್ನು ನೀಡುವ ಹಕ್ಕು ವಿದ್ವಾಂಸರಾದ ನಮಗೆ ಸೇರಿದ್ದು. ಜನ ಅಂದ ಮಾತ್ರಕ್ಕೆ ಆಗಲಿಲ್ಲ. ಇಂದು ನಮ್ಮೆದುರು ಹಾಡಿ ನಮ್ಮ ಮೆಚ್ಚುಗೆಯನ್ನು ಪಡೆದರೆ ಮಾತ್ರ ಬೆಂಗಳೂರಿನ ಮಹಾಜನರು ಕೊಟ್ಟಿರುವ ಪ್ರಶಸ್ತಿಯನ್ನು ಉಳಿಸಿಕೊಳ್ಳಬಹುದು'' ಎಂದರು ಶೇಷಣ್ಣ.

ಇಷ್ಟರಲ್ಲಿ ದಕ್ಷಿಣ ದೇಶದ ವಿದ್ವಾಂಸರೊಬ್ಬರು ಮೇಲೆದ್ದರು. ತಮ್ಮ ಮನೆಯಲ್ಲಿ ಆರು ತಿಂಗಳ ಕಾಲ ಗುಟ್ಟಿನಲ್ಲಿ ಪಾಠಮಾಡಿಕೊಂಡಿದ್ದ ಆರು ಅಕ್ಷರ ಕಾಲದ ಪಲ್ಲವಿಯೊಂದನ್ನು ಹಾಡಿ ತೋರಿಸುತ್ತಾ ''ಕೃಷ್ಣಪ್ಪನವರೇ, ನೀವು ಆಮೂಲಾಗ್ರವಾದ ಕಛೇರಿಯನ್ನೇನೂ ಮಾಡಬೇಕಾದ ಅಗತ್ಯವಿಲ್ಲ. ಈ ಪಲ್ಲವಿಯನ್ನು ಸ್ವಲ್ಪ ನೆರವಲುಮಾಡಿ ನಾಲ್ಕಾವರ್ತ ಸ್ವರಹಾಡಿದರೆ ಸಾಕು'' ಎಂದರು.

ಕೃಷ್ಣಪ್ಪನವರಿಗೆ ಮೈಯೆಲ್ಲ ಬೆಂಕಿಯಾಯಿತು. ಆದರೂ ಸ್ವಲ್ಪವೂ ಎದೆಗೆಡಲಿಲ್ಲ. ಅಪಾಯದ ಕೊಂಬಿನ ಮೇಲೆ ಕುಳಿತು ಸವಾರಿ ಮಾಡುವುದು ಅವರ ಜಾಯಮಾನವಾಗಿತ್ತು. ''ಗುರುಗಳೇ ನನ್ನ ಶ್ರೇಯೋಭಿವೃದ್ಧಿ ನಿಮ್ಮ ಆಶೀರ್ವಾದದ ಫಲವೇ ಹೊರತು ಬೇರೆಯಲ್ಲ. ಶಿಷ್ಯನನ್ನು ಪರೀಕ್ಷಿಸಿಯೇ ತೀರಬೇಕೆಂಬುದು ನಿಮ್ಮ ನಿರ್ಧಾರವಾಗಿದ್ದರೆ ನಿಮ್ಮ ಅಪ್ಪಣೆಗೂ ಈ ವಿದ್ವಾಂಸರ ಸವಾಲಿಗೂ ಸಿದ್ಧ ನಾನು. ಆದರೆ ನನ್ನದೂ ಒಂದು ನಿಬಂಧನೆಯುಂಟು. ಈ ಪಲ್ಲವಿಯನ್ನು ಹಾಡಿದ ಬಳಿಕ ನಾನೂ ಒಂದು ಪಲ್ಲವಿಯನ್ನು ಇಲ್ಲಿಯೇ ಸಿದ್ಧಪಡಿಸಿಕೊಡುತ್ತೇನೆ. ಅದನ್ನು ಈ ವಿದ್ವಾಂಸರೂ ಹಾಡಿ ತೋರಿಸುವಂತೆ ಅಪ್ಪಣೆಯಾಗಬೇಕು'' ಎಂದರು. ಪಲ್ಲವಿಯನ್ನು ನಿರ್ಭಯವಾಗಿ ನಿರರ್ಗಳವಾಗಿ ನಿರ್ವಹಿಸಿದರು ಕೃಷ್ಣಪ್ಪ. ''ಇನ್ನು ನನ್ನ ಸವಾಲು?'' ಎಂದರು.

''ನಿಜವಾಗಿಯೂ ನೀನು ಮೈಸೂರಿನ ಗಾನ ಕೇಸರಿಯೇ ಹೌದು ಕೃಷ್ಣಪ್ಪ. ನಿನ್ನ ಯೋಗ್ಯತೆಯನ್ನು ನಾನೇನೂ ಹೊಸದಾಗಿ ಪರೀಕ್ಷಿಸಬೇಕಾಗಿರಲಿಲ್ಲ. ನಿನ್ನ ಪರೋಕ್ಷದಲ್ಲಿ ಸಣ್ಣ ಮಾತುಗಳನ್ನಾಡುತ್ತಿದ್ದ ಜನಕ್ಕೆ ನಿನ್ನ ಪಾಂಡಿತ್ಯದ ಪರಿಚಯ ಮಾಡಿಕೊಡುವ ಉದ್ದೇಶದಿಂದ ನಿನ್ನನ್ನು ಇಂದು ಬರಮಾಡಿಕೊಂಡೆ. ದೇವರು ನಿನ್ನನ್ನು ಚೆನ್ನಾಗಿಟ್ಟಿರಲಿ'' ಎಂದು ಕೃಷ್ಣಪ್ಪನವರನ್ನು ಆಲಂಗಿಸಿದರು ಶೇಷಣ್ಣ.

ಶ್ರೀರಂಗಪಟ್ಟಣದಲ್ಲಿ ಸೇರಿದ್ದ ಸಂತೋಷ ಕೂಟವೊಂದರಲ್ಲಿ ಶೇಷಣ್ಣ, ಕೃಷ್ಣಪ್ಪ ಮತ್ತು ನಿನ್ನ ಮುತ್ತಜ್ಜ, ಇವರ ಕಛೇರಿಗಳು ನಡೆಯುವಂತೆ ಏರ್ಪಾಡಾಗಿದ್ದಿತು. ಶೇಷಣ್ಣನವರ ವೀಣಾವಾದನ ಮತ್ತು ತಾತನವರ ಗಾಯನ ಮುಗಿದ ಬಳಿಕ ಕೃಷ್ಣಪ್ಪನವರ ಹಾಡುಗಾರಿಕೆ ಮೊದಲಾಯಿತು. ಈ ಹೊತ್ತಿಗೆ ದಿವಾನ್ ಮಾಧವರಾಯರೂ ದಿವಾನ್ ಕೃಷ್ಣಮೂರ್ತಿಗಳೂ ಕಾರ್ಯಗೌರವದ ನಿಮಿತ್ತ ಸಭೆಯನ್ನು ಬಿಡಬೇಕಾಗಿ ಬಂದಿತು. ಇದೇ ಸಮಯ ಕಾಯುತ್ತಿದ್ದರು ಕೆಲವು ಕುಹಕಿಗಳು. ಈ ಹಿಂದೆ ಶ್ರೀರಂಗಪಟ್ಟಣದಲ್ಲಿ ಕೃಷ್ಣಪ್ಪನವರಿಗೆ ಘಂಟೆಯ ತೋಡವನ್ನು ಕೊಟ್ಟು ಗೌರವಿಸಿದ್ದಂತೆ ತಾತನವರಿಗೂ ಮರ್ಯಾದೆ ಮಾಡಲು ಸಿದ್ಧತೆ ನಡೆದಿತ್ತು. ಈ ಪುಂಡರಿಗೆ ಇದರ ಸಮಾಚಾರ ತಿಳಿದಿತ್ತು. ತಾತನವರನ್ನೂ ಕೃಷ್ಣಪ್ಪನವರನ್ನೂ ಜೊತೆಯಲ್ಲಿ ಹಾಡುವಂತೆ ಮಾಡಿ ಇಬ್ಬರ ಪಾಂಡಿತ್ಯವೂ ಸರಿಸಮ ಎಂದು ತೀರ್ಮಾನವಾದರೆ ಮಾತ್ರ ತಾತನವರಿಗೆ ಘಂಟೆಯ ತೋಡ ಕೊಡಿಸಬೇಕು, ಇಲ್ಲವಾದರೆ ಕೂಡದು ಎಂದು ಯೋಚಿಸಿದ್ದರು ಈ ಜನ. ತಮ್ಮ ಸಲಹೆಯನ್ನು ಶೇಷಣ್ಣನವರಿಗೆ ತಿಳಿಸಿದರು. ''ವಿದ್ವಾಂಸರನ್ನು ಹೀಗೆ ಒಬ್ಬರ ಮೇಲೊಬ್ಬರನ್ನು ಎತ್ತಿಕಟ್ಟುವುದು ಚೆನ್ನಾಗಿರುವುದಿಲ್ಲ. ಅಲ್ಲದೆ ಆಚಾರ್ಯರು ಇದೇ ತಾನೆ ಹಾಡಿ ಮುಗಿಸಿದ್ದಾರೆ'' ಎಂದು ಶೇಷಣ್ಣನವರು ಎಷ್ಟು ಬಗೆಯಲ್ಲಿ ಹೇಳಿದರೂ ಆ ಜನ ಕೇಳಲಿಲ್ಲ. ಕೊನೆಗೆ ಯತ್ನವಿಲ್ಲದೆಯೇ ಶೇಷಣ್ಣ ಎದ್ದುನಿಂತು, ತಾತನವರನ್ನೂ ಕೃಷ್ಣಪ್ಪನವರನ್ನೂ ಉದ್ದೇಶಿಸಿ ''ನೀವಿಬ್ಬರೂ ಜೊತೆಯಲ್ಲಿ ಹಾಡುವುದನ್ನು ಕೇಳಬೇಕೆಂದು ಮಹಾಜನರು ಅಪೇಕ್ಷಿಸುತ್ತಾರೆ. ನಿಮಗೇನೂ ಹೊಸದಲ್ಲವಲ್ಲ ಇದು ! ಸ್ವಲ್ಪ ಹಾಡಿಬಿಡಿ'' ಎಂದರು.

*(15ನೇ ಪುಟಕ್ಕೆ)*

# ಶ್ವಾನ ಸಂಗೀತ



ಬಿ.ವಿ.ಕೆ. ಶಾಸ್ತ್ರೀ

ಪಕ್ಷಿಗಳಿಗೂ ಪ್ರಾಣಿಗಳಿಗೂ ಸಂಗೀತಕ್ಕೂ ಏನು ಸಂಬಂಧ ?

ಸಂಗೀತವು ವೇದಮೂಲವೆಂದು ಪ್ರಾಚೀನಕಾಲದಿಂದಲೂ ಬಂದ ನಂಬಿಕೆ. ಆದರೆ ಅದರ ಕೆಲವು ಅಂಶಗಳಾದರೂ ಪ್ರಕೃತಿ ಹಾಗೂ ಪ್ರಾಣಿ ಮೂಲದಿಂದ ಬಂದುದು ಎಂಬ ಭಾವನೆಗೂ ಸಮರ್ಥನೆ ಇದೆ. ನಿದರ್ಶನವಾಗಿ ಏಳೂ ಸ್ವರಗಳ ನಾದಕ್ಕೆ ಪಕ್ಷಿ ಪ್ರಾಣಿಗಳ ಧ್ವನಿ ಸಾಮ್ಯವಿರುವುದನ್ನು ಎಲ್ಲ ಶಾಸ್ತ್ರ ಗ್ರಂಥಗಳು ಹೀಗೆ ಹೇಳಿವೆ - **ಮಯೂರಸ್ಯ ಸ್ವರಂ ಷಡ್ಜಂ ಋಷಭೋ ವೃಷಭಧ್ವನಿಃ**. ಹೀಗೆ ಮಿಕ್ಕ ಸ್ವರಗಳಿಗೂ ಬೇರೆ ಬೇರೆ ಪಕ್ಷಿ ಪ್ರಾಣಿಗಳ ಕೂಗಿನ ಸಾಮ್ಯವನ್ನು ಹೇಳಲಾಗಿದೆ. ಇದನ್ನೇ ನಿಜಗುಣ ಶಿವಯೋಗಿ ಕನ್ನಡದಲ್ಲಿ ಹೀಗೆ ಹೇಳಿದ್ದಾರೆ.

ಬಳಿಕ ನೌಲು ಕೂಗು । ಗೂಳಿಗುಟ್ರ । ಅಜಧ್ವನಿ ಕ್ರೌಂಚಸ್ವನ... ಇತ್ಯಾದಿ.

ಇವು ಸ್ವರಗಳ ಧ್ವನಿ ಸಾಮ್ಯವನ್ನು ವಿವರಿಸಬಹುದು ಅಥವಾ ಅವುಗಳ ಮೂಲದ ಸೂಚ್ಯವಾಗಿರಬಹುದು. ಒಟ್ಟಿನಲ್ಲಿ ಸಂಗೀತಕ್ಕೂ ಈ ಜೀವಿಗಳಿಗೂ ಒಂದು ಸಂಬಂಧವಿದೆಯೆಂದು ಸೂಚಿಸುವಂತಿದೆ.

ಇದನ್ನೇ ನಿತ್ಯಜೀವನದಲ್ಲಿಯೂ ನಾವು ಕಾಣಬಹುದಾಗಿದೆ. ಉದಾಹರಣೆಗೆ ರಾತ್ರಿ ಹತ್ತು ಬೆಕ್ಕುಗಳು ಜಗಳವಾಡುವಾಗ ಮಾಡುವ ಕೂಗಾಟಗಳು. ಅವು ಬೆಕ್ಕುಗಳು ಸಹಜವಾಗಿ ಮಾಡುವಂತಹ ಧ್ವನಿಗಳಲ್ಲ ಆ ಕೂಗುಗಳು ಕೆಲವು ಸಲ ಎಳೆಯ ಮಕ್ಕಳು ಅಳುವಂತಿರುತ್ತವೆ. ಇನ್ನು ಕೆಲವು ವೇಳೆ ಯಾವುದೋ ಹುಡುಗಿ ಹಾಡುತ್ತಿರುವ ಭ್ರಮೆ ಉಂಟುಮಾಡುವಂತಿರುತ್ತವೆ. ಹಾಗೆಯೇ ಮೈನಾ ಹಕ್ಕಿ ಹಾಡುವುದನ್ನು ಕೇಳಿಲ್ಲವೇ? ಅದು ಅನುಕರಣೆ ಇರಬಹುದು. ಆದರೆ ಅದರಲ್ಲಿ ಹಾಡುವ ಪ್ರವೃತ್ತಿ ಮತ್ತು ಸಾಮರ್ಥ್ಯ ಕಾಣಬರುತ್ತದೆ. ಈ ಹಿನ್ನೆಲೆಯಲ್ಲಿ ಈಗ ಹಾಡುತ್ತಿದ್ದ ಒಂದು ಪ್ರಾಣಿಯ ಕತೆ.

ಸುಮಾರು ಎಪ್ಪತ್ತು-ಎಪ್ಪತ್ತೆರಡು ವರುಷಗಳ ಹಿಂದೆ ಮೈಸೂರು ನಗರದ ರಂಗಾಚಾರ್ಲು ಪುರಭವನದಲ್ಲಿ ಒಂದು ದೊಡ್ಡ ಸಮಾರಂಭ. ಸಂಗೀತ ವಿದ್ವಾಂಸರು, ರಸಿಕರು, ಮಹಾಜನಗಳೂ ನೆರೆದ ಈ ಕೂಟದಲ್ಲಿ ಪ್ರಸಿದ್ಧ ಹಿಂದೂಸ್ತಾನಿ ಗವಾಯಿ ಉಸ್ತಾದ್ ಖಾನ್ ಅಬ್ದುಲ್ ಕರೀಂಖಾನರಿಗೆ ''ಸಂಗೀತ ರತ್ನ'' ಎಂಬ ಬಿರುದನ್ನಿತ್ತು ಅದರ ಅಂಗವಾಗಿ ಚಿನ್ನದ ಪದಕಹಾರ ಮುಂತಾದವುಗಳನ್ನು ನೀಡಿ ಗೌರವಿಸಲಾಯಿತು. ಸಮಾರಂಭದ ಅಧ್ಯಕ್ಷರು ವೀಣೆ ಶೇಷಣ್ಣನವರು. ಈ ಬಗೆಗೆ ಬರೆಯುತ್ತಾ ಕೆಲವು ಉತ್ತರ ಭಾರತದ ಲೇಖಕರು, ಒಂದೊಂದು ಸಲ ಮೈಸೂರು, ಇನ್ನೊಂದು ಸಲ ಮದರಾಸು ಹೀಗೆ ಹೇಳಿಕೊಂಡಿದಾರೆ. ಈ ಲೋಪಕ್ಕೆ ಕಾರಣ ಹುಡುಕಬೇಕಾಗಿಲ್ಲ. ಅಂದು ದಕ್ಷಿಣ ಭಾರತವೆಂದರೆ- ಮದರಾಸು. ಇಲ್ಲಿನ ಜನವೆಲ್ಲ ಮದರಾಸಿಗಳು. ಮದರಾಸು ಮತ್ತು ಮೈಸೂರು ಬೇರೆ ಬೇರೆ ಊರುಗಳೆಂಬುದೂ ಅಲ್ಲಿನ ಅನೇಕರಿಗೆ ತಿಳಿಯದು.

ಈ ಸಂಗೀತ ರತ್ನ ಬಿರುದು ಬಂದ ಸಮಾಚಾರ ಹರಡಿದೊಡನೆ, ಖಾನ್ ಸಾಹೇಬರಿಗೆ ಬೇರೆ ಬೇರೆ ಊರುಗಳಿಂದ, ಸಂಸ್ಥೆಗಳಿಂದ ಕಚೇರಿಗೆ ಆಹ್ವಾನಗಳು ಬರಲಾರಂಭವಾಯಿತು. ಅವುಗಳನ್ನು ಮನ್ನಿಸಿ ಖಾನ್ ಸಾಹೇಬರು ಸಂಚಾರ ಪ್ರಾರಂಭಿಸಿದರು. ಒಂದೊಂದು ಊರಿನಲ್ಲಿಯೂ ರಸಿಕರ ಆಹ್ವಾನವನ್ನು ಮನ್ನಿಸಿ ಸಂಗೀತ ಕಚೇರಿ ಹಾಗೂ ವಿಚಾರ ವಿನಿಮಯ ಮಾಡುತ್ತಾ, ಬಾಗಲಕೋಟೆಗೆ ಬಂದರು. ಸಂಗೀತ ಪ್ರೇಮಿಗಳಿಂದ ತುಂಬಿದ ಸ್ಥಳ - ಬಾಗಲಕೋಟೆ. ಅಲ್ಲಿ ಕೆಲವು ದಿನ ನಿಂತು, ಗಾಯನ, ಸಲ್ಲಾಪಾದಿಗಳಿಂದ ರಸಿಕ ಜನಕ್ಕೆ ಹರುಷ ನೀಡಲಾರಂಭಿಸಿದರು. ಅಲ್ಲಿ ಅವರ ಜೀವನದ ಒಂದು ಸ್ವಾರಸ್ಯ ಘಟನೆಯೂ ಆಯಿತು.

ಬಾಗಲಕೋಟೆಯಲ್ಲಿ ಬಿಡಾರ ಮಾಡಿದ್ದಾಗ ಅಲ್ಲಿ ಯಾರೋ ಒಂದು ನಾಯಿಮರಿಯನ್ನು ಮಾರಲು

ತಂದರು. ನೋಡುವುದಕ್ಕೆ ಬಹಳ ಮುದ್ದಾಗಿದ್ದ ಈ ಮರಿಯನ್ನು ನೋಡಿ ಖಾನ್ ಸಾಹೇಬರು ಆಸೆಯಿಂದ ಅದನ್ನು ಕೊಂಡು ಅದಕ್ಕೆ ''ಟಿಪ್ಪು'' ಎಂದು ಹೆಸರಿಟ್ಟರು. ಮನೆಗೆ ತಂದು ಕಟ್ಟಿದ ಮೇಲೆ ಅದು ಆಹಾರ, ನೀರು ಯಾವುದನ್ನೂ ತೆಗೆದುಕೊಳ್ಳಲೊಲ್ಲದು. ಖಾನ್ ಸಾಹೇಬರಿಗೆ ಆತಂಕ. ಅನಂತರ ಮೂರನೆಯ ದಿನ ತಾವೇ ಅದರ ಮುಂದೆ ಆಹಾರವಿಟ್ಟರು. ಆದರೂ ಮುಟ್ಟಲಿಲ್ಲ. ಕೊನೆಗೆ ಬೇಸರದಿಂದ ''ಟಿಪ್ಪು... ನೀನೇನಾದರೂ ಪೂರ್ವಜನ್ಮದಲ್ಲಿ ಬ್ರೊಮ್ಮನ್ ಆಗಿದ್ದೆಯಾ? ಬೇರೆ ಯಾರು ಮುಟ್ಟಿದ ಪದಾರ್ಥವನ್ನೂ ತಿನ್ನುವುದಿಲ್ಲವೇ?'' ಎಂದು ಬೇಸರದಿಂದ ಕೇಳಿದರು. ಆಮೇಲೆ ತಿನ್ನಲಾರಂಭಿಸಿತು.

ಆಹಾರದ ಬಗೆಗಿನ ಹಟವೊಂದೇ ಅಲ್ಲ, ಇನ್ನೂ ಒಂದು ವಿಚಿತ್ರ ನಡತೆ ಕಾಣಬಂದಿತು - ಟಿಪ್ಪುವಿನಲ್ಲಿ. ಅಬ್ದುಲ್ ಕರೀಂ ಖಾನರು ಶಿಷ್ಯರಿಗೆ ಸಂಗೀತ ಪಾಠ ಹೇಳಲು ಪ್ರಾರಂಭಿಸಿದೊಡನೆಯೇ ಎದ್ದು ಕುಳಿತು ವಿಚಿತ್ರವಾದ ಸದ್ದು ಮಾಡುತ್ತಾ ರಗಳೆ ಮಾಡಲಾರಂಭಿಸಿತು. ತಡೆಯಲಾರದೆ ಖಾನ್ ಸಾಹೇಬರು, ಅದರ ಸರಪಣಿಯನ್ನು ಬಿಚ್ಚಿದೊಡನೆಯೇ ಓಡಿ ಬಂದು ವಿದ್ಯಾರ್ಥಿಗಳ ಬಳಿ ಕುಳಿತುಕೊಳ್ಳುತ್ತಿತ್ತು. ಪಾಠ ಮುಗಿದ ನಂತರ ಪುನಃ ಸ್ವಸ್ಥಳಕ್ಕೆ ಹೋಗಿ ನಿಶ್ಶಬ್ದವಾಗಿರುತ್ತಿತ್ತು. ನೋಡಿದರೆ ಯಾವನೋ ಪೂರ್ವ ಜನ್ಮದಲ್ಲಿ ಅಬ್ದುಲ್ ಕರೀಂ ಖಾನರ ಬಳಿ ಸಂಗೀತ ಕಲಿಯಲು ಆಸೆಪಟ್ಟು ಆಗದೆ, ಈ ಜನ್ಮದಲ್ಲಿ ಆ ಆಸೆ ತೀರಿಸಿಕೊಳ್ಳುವ ರೀತಿ ಇದ್ದಂತಿತ್ತು. ಆದ್ದರಿಂದ ಖಾನ್ ಸಾಹೇಬರು ಟಿಪ್ಪು ಇತರ ವಿದ್ಯಾರ್ಥಿಗಳೊಂದಿಗೆ ಕುಳಿತು ಕೇಳುವುದಕ್ಕೆ ಅನುವು ಮಾಡಿಕೊಟ್ಟರು. ಆದರೆ ಅದೊಂದು ವಿಚಿತ್ರ. ಟಿಪ್ಪು ಬಹು ಶೀಘ್ರದಲ್ಲಿ ವಿದ್ಯಾರ್ಥಿಗಳೊಂದಿಗೆ ದನಿಕೂಡಿಸಿ ಸ್ವರಗಳನ್ನು ಹಾಡಲು ಪ್ರಾರಂಭಿಸಿತು. ಆರು ಮಾಸದ ವೇಳೆಗೆ ಪ್ರಕೃತಿ ವಿಕೃತಿಗಳೂ ಸೇರಿ ಹನ್ನೆರಡೂ ಸ್ವರಗಳನ್ನು ಸರಾಗವಾಗಿ ಹಾಡಲಾರಂಭಿಸಿತು.

ಇದನ್ನೇ ಗಮನಿಸುತ್ತಿದ್ದ ಅಬ್ದುಲ್ ಕರೀಂಖಾನರ ಕೆಲವು ಅಭಿಮಾನಿಗಳು ಟಿಪ್ಪುವಿನ ಈ ಪ್ರತಿಭೆಯ ಸಾರ್ವಜನಿಕ ಪ್ರದರ್ಶನ ಏರ್ಪಡಿಸಬೇಕೆಂದು ಒತ್ತಾಯ ಮಾಡಲಾರಂಭಿಸಿದರು. ಖಾನ್ ಸಾಹೇಬರಿಗೂ ಆಸೆಯಿದ್ದರೂ ಆತಂಕಬೇರೆ - ನಾಯಿ ಸ್ವಭಾವ, ಏನು ಮಾಡುತ್ತ್ಯೋ ಅಥವಾ ಎಲ್ಲಿ ಓಡಿ ಹೋಗುತ್ತ್ಯೋ ಎಂದು. ಆದರೂ ಧೈರ್ಯ ಮಾಡಿದರು. ಸತಾರಾದಲ್ಲಿ ಏರ್ಪಾಡಾಯಿತು, ದಿನ ನಿರ್ಧಾರವಾಯಿತು. ಸಾಕಷ್ಟು ಪೂರ್ವ ಪ್ರಚಾರವೂ ಆಯಿತು. ನಿಗದಿತ ವೇಳೆಯಲ್ಲಿ ಟಿಪ್ಪು ವೇದಿಕೆಗೆ ನೆಗೆದು ಝೇಂಕರಿಸುತ್ತಿದ್ದ ಎರಡು ತಂಬೂರಿಗಳ ಮಧ್ಯೆ ಕುಳಿತುಕೊಂಡಿತು. ಖಾನರು ಷಡ್ಜ ಸ್ವರವನ್ನು ಹಿಡಿದು ಹಾಡಿದರು. ಟಿಪ್ಪು ಅದೇ ಸ್ವರವನ್ನು ಹಿಡಿದು ದೀರ್ಘವಾಗಿ ಹಾಡಿತು. ಸ್ವರವೂ ತಂಬೂರಿಗಳ ಆಧಾರ ಷಡ್ಜದೊಂದಿಗೆ ಶುದ್ಧವಾಗಿ ಸೇರಿದ್ದಿತು. ಹೀಗೆಯೇ ಒಂದರ ಹಿಂದೆ ಒಂದರಂತೆ ಮಿಕ್ಕ ಸ್ವರಗಳನ್ನೂ ನಿರೂಪಿಸಲಾಯಿತು.

ಅನಂತರ ಖಾನ್ ಸಾಹೇಬರು ಸಭೆಯನ್ನುದ್ದೇಶಿಸಿ ''ಟಿಪ್ಪುವನ್ನು ಯಾರಾದರೂ ಪರೀಕ್ಷಿಸಬಹುದು'' ಎಂದರು. ಯಾರೂ ಮುಂದೆ ಬರಲಿಲ್ಲ. ಕೊನೆಗೆ ಒಬ್ಬರು ''ನೀವೆ ಮಾಲ್‌ಕೌಂಸ್ ರಾಗ ಹಾಡಿ'' ಎಂದರು. ಖಾನ್ ಸಾಹೇಬರು ಮಾಲ್‌ಕೌಂಸ್ ಆಲಾಪನೆ ಮಾಡುತ್ತಿದ್ದಂತೆಯೇ ಟಿಪ್ಪು ದನಿಗೂಡಿಸಿ ಆಲಾಪನೆ ಮಾಡಿತು. ಸಭೆ ಬೆರಗಾಯಿತು. ಈ ಅದ್ಭುತದ ಸುದ್ದಿ ಎಲ್ಲಾ ಕಡೆ ಹರಡಿ, ಟಿಪ್ಪು ಸಂಗೀತ ಕಚೇರಿಗಳಿಗೆ ಒತ್ತಾಯ ಬರಲು ಆರಂಭವಾಯಿತು. ಸತಾರದಿಂದ, ಪುಣೆ ಅನಂತರ ಬೊಂಬಾಯಿಯಲ್ಲಿ ಕಚೇರಿಗಳು ನಡೆದವು. ಬೊಂಬಾಯಿ ಕಚೇರಿ ವಿಶೇಷವಾದುದು. ಅದರಲ್ಲಿ ಕುತೂಹಲಿ ಶ್ರೋತೃಗಳಲ್ಲಿ ಡಾ॥ಆನಿಬೆಸಂಟ್, ಸರೋಜಿನಿ ನಾಯುಡು, ಜಮ್ನಾದಾಸ್ ದ್ವಾರಕಾದಾಸ್, ಬಿ.ಜಿ. ಗಾರ್ನಿಯನ್, ಬೊಂಬಾಯಿ ಕ್ರಾನಿಕಲ್ ಸಂಪಾದಕ ಸೈಯ್ಯದ್ ಅಬ್ದುಲ್ಲಾ ಬ್ರೆಲ್ವಿ, ಮುಂಬಾಯಿ ಸಮಾಚಾರ್ ಪತ್ರಿಕೆಯ ಸೊರಾಬ್ಜಿ ಕಪಾಡಿಯಾ ಅಲ್ಲದೆ ಮೂರುನಾಲ್ಕು ಮಂದಿ ಸರ್ಕಸ್ ಮಾಲೀಕರೂ ಬಂದಿದ್ದರು. ಆ ಸಭೆಯ ಮುಂದೆ ಟಿಪ್ಪು ಮೊದಲು ಹನ್ನೆರಡೂ ಪ್ರಕೃತಿ ವಿಕೃತಿ ಸ್ವರಗಳನ್ನು ಹಾಡಿ ಅನಂತರ ಶಂಕರ, ಶ್ಯಾಮ್ ಕಲ್ಯಾಣ್, ಮುಲ್ತಾನಿ, ಪೂರಿಯ, ಪೂರಿಯಾ ಧನಾಶ್ರಿ ರಾಗಗಳಲ್ಲಿ ತಾನಗಳನ್ನು ಹಾಡಿತು. ಸಭೆಯೆಲ್ಲಾ ಬೆರಗಾಗಿ, ಇದೊಂದು ಊಹಾತೀತ ಅದ್ಭುತ ಎಂದು ಉದ್ಗರಿಸಿದಲ್ಲಿ ಸರ್ಕಸ್ ಮಾಲೀಕರು, ಇಂತಹ ಅದ್ಭುತವನ್ನು ನಾವು ಕೇಳಿರಲಿಲ್ಲ. ಒಂದು ಪ್ರಾಣಿಗೆ ಪೂರ್ವಜನ್ಮ ಸಂಸ್ಕಾರ ಇಲ್ಲದಿದ್ದರೆ ಇಂತಹ ಅಪರೂಪ ಶಕ್ತಿಯನ್ನು ತಯಾರಿಕೆಯ ಮೂಲಕ ತರಲು ಸಾಧ್ಯವೇ ಇಲ್ಲ, ಎಂದರು.

# ಅಶೇಷ ಪದ್ಮನಾಭಸಂಪುಟ - ಒಂದು ಪರಿಚಯ



-ಶ್ರೀಕಾಂತಂ ನಾಗೇಂದ್ರ ಶಾಸ್ತ್ರೀ

**(ಮುಂದುವರೆದ ಭಾಗ)**

**ಸಂಪುಟ-2 :**

ಇಲ್ಲಿ ಪದ್ಮನಾಭಯ್ಯನವರ ಹನ್ನೊಂದು ಸಂಸ್ಕೃತ ರಚನೆಗಳಿವೆ. ಇದರಲ್ಲಿ ಮೊದಲನೆಯದಾದ ಶ್ರೀಗಣಪತೇ ಎಂಬ ಕೃತಿಯು ಛಾಯಾನಾಟ ರಾಗದಲ್ಲಿ ರಚಿಸಲ್ಪಟ್ಟಿದೆ. ಈ ರಾಗದ ಅವರೋಹಣದಲ್ಲಿ ಸನಿದನಿಪಮರಿಸ ಎಂಬ ವಕ್ರ ಸಂಚಾರವಿದ್ದಾಗ್ಯೂ ಈ ಕೃತಿಯಲ್ಲಿ ಒಂದೆಡೆ ಸನಿದನಿಪಮಗಮರಿಸ ಎಂಬ ಪ್ರಯೋಗವು ರಂಜಕ ಹಾಗೂ ವಿಶೇಷ ಸಂಚಾರವಾಗಿ ಬಳಕೆಯಾಗಿದೆ. ನಾಟಕುರಂಜಿ ರಾಗದ 'ಶ್ರೀಹೇರಂಬಮೀಡೆ' ಕೃತಿಯು ಹೆಚ್ಚಾಗಿ ವೀಣೆಯ ಉರುಟುಗಳು ಹಾಗೂ ಎರಡು ಕಾಲದ ಚಿಟ್ಟೆಸ್ವರವನ್ನು ಹೊಂದಿದ್ದು ವೈಣಿಕನಿಂದ ರಚಿತವಾಗುವ ರಚನೆಗಳಿಗೆ ಉತ್ತಮ ಉದಾಹರಣೆಯಾಗಿದೆ. ಈ ಸಂಪುಟದಲ್ಲಿರುವ 'ಗರಳಪುರೀಶ' (ಸರಸಾಂಗಿ), 'ಭಾವಯಾಮಿ' (ನಾಗಸ್ವರಾವಳಿ) ಕೃತಿಗಳು ತ್ಯಾಗರಾಜರ ಕೃತಿಗಳಂತೆ ಅನುಪಲ್ಲವಿ ಹಾಗೂ ಚರಣದ ಉತ್ತರ ಭಾಗದ ಧಾತುಸಾಮ್ಯವನ್ನು ಹೊಂದಿವೆ. 'ಸಾರಸದಳನಯನಂ' (ತೋಡಿ) ಕೃತಿಯು ರಚನಾವಿಧಾನದಲ್ಲಿ ದೀಕ್ಷಿತರ ಶೈಲಿಯನ್ನು ಜ್ಞಾಪಕಕ್ಕೆ ತರುತ್ತದೆ. ಈ ಕೃತಿಯಲ್ಲಿ ಅನುಪಲ್ಲವಿ ಹಾಗೂ ಚರಣಗಳೆರಡರ ಕೊನೆಯಲ್ಲಿಯೂ ಮಧ್ಯಮ ಕಾಲದ ಸಾಹಿತ್ಯವನ್ನು ಹೊಂದಿರುವುದು ವಿಶೇಷ.

ಜನಪ್ರಿಯ ರಾಗಗಳಲ್ಲದೆ ಹಲವಾರು ಅಪರೂಪ ರಾಗಗಳಿಗೂ ಲಕ್ಷ್ಯವನ್ನೊದಗಿಸಿರುವುದು ಸಂಗೀತ ಪ್ರಪಂಚಕ್ಕೆ ಪದ್ಮನಾಭಯ್ಯನವರ ವಿಶಿಷ್ಟ ಕೊಡುಗೆ. ಈ ದೃಷ್ಟಿಯಿಂದ 'ಸತ್ಯವತಿ' ಎಂಬ ರಾಗವನ್ನು ಗಮನಿಸಬಹುದು. ಈ ರಾಗವು 15ನೇ ಮಾಯಾಮಾಳವಗೌಳಜನ್ಯ. ಅಂತರ ಗಾಂಧಾರ, ಶುದ್ಧ ರಿಷಭ, ಶುದ್ಧಧೈವತ, ಕಾಕಲಿ ನಿಷಾದಗಳನ್ನುಳ್ಳ ಈ ರಾಗದ ಆರೋಹಣದಲ್ಲಿ ಮಧ್ಯಮನಿಷಾದಗಳೂ, ಅವರೋಹಣದಲ್ಲಿ ಮಧ್ಯಮ ವರ್ಜ್ಯವೂ ಆಗಿದ್ದು ಸರಿಗಪಧಸ - ಸನಿದನಿಪದಪಗರಿಸ ಎಂಬ ವಕ್ರ ಸಂಚಾರವನ್ನು ಹೊಂದಿದೆ. ಈ ರಾಗವು ಸಂಚಾರದಲ್ಲಿ ಭೌಳಿ (ಸರಿಗಪದಸ-ಸನಿದಪಗರಿಸ), ಜಖಾಸು (ಸರಿಗಪದಸ-ಸದಪಗರಿಸ) ರಾಗಗಳನ್ನು ಹೋಲುವಂತೆ ಕಂಡರೂ ಆರೋಹಣದಲ್ಲಿನ ಸಗರಿಗ ಹಾಗೂ ಅವರೋಹಣದಲ್ಲಿನ ಸನಿದನಿಪದಪ ಸಂಚಾರಗಳಿಂದಾಗಿ ಪ್ರತ್ಯೇಕವಾದ ಸ್ಪಷ್ಟ ರೂಪವನ್ನು ಪಡೆದಿವೆ. ಜೊತೆಗೆ ಇಲ್ಲಿನ ಕಾಕಲಿನಿಷಾದವು ನೇರವಾಗಿ ಶುದ್ಧಸ್ಥಾನದಲ್ಲಿ ನುಡಿಯುತ್ತದೆ. ಈ ರಾಗದಲ್ಲಿನ ಅಘರಹಿತಂ ಭಜರೇ ಎಂಬ ಕೃತಿಯು ಸಗರಿಗ ಎಂಬ ಆರೋಹಣ ಸಂಚಾರದಲ್ಲೇ ಪ್ರಾರಂಭವಾಗಿ ಅವರೋಹಣವಾದ ಸನಿದನಿಪದಪಗರಿಸಾ ಎಂಬ ಪ್ರಯೋಗದಲ್ಲೇ ಮುಗಿಯುವುದು ಈ ಕೃತಿಯ ಇನ್ನೊಂದು ವೈಶಿಷ್ಟ್ಯ. ಭೌಳಿ ರಾಗದಂತೆ ಈ ರಾಗವೂ ಪ್ರಾತಃಕಾಲದಲ್ಲಿ ಹಾಡಬೇಕಾದ ರಾಗವೆನಿಸುತ್ತದೆ. ಈ ಕೃತಿಯ ಸಾಹಿತ್ಯದಲ್ಲಿ ಯಮಕಾಲಂಕಾರವಾಗಿ ಬಳಸಲಾಗಿರುವ 'ದಿನಕರ' ಶಬ್ದವೂ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

**ಪದ್ಮನಾಭ ಪಂಚರತ್ನ ಕೃತಿಗಳು :** ಪದ್ಮನಾಭಯ್ಯನವರು ಶ್ರೀರಾಮನ ಪರಮಭಕ್ತರು. ರಾಮತಾರಕ ಮಂತ್ರೋಪಾಸಕರು. ತಮ್ಮ ರಾಮಭಕ್ತಿಯ ಕುರುಹಾಗಿ ಶ್ರೀರಾಮಪರವಾದ 5 ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿ 'ಪದ್ಮನಾಭ ಪಂಚರತ್ನ'ಗಳೆಂದು ಕರೆದುಕೊಂಡಿದ್ದಾರೆ. ಅವರ ಇತರೆ ಕೃತಿಗಳಿಗಿಂತ ಈ ಐದೂ

ಕೃತಿಗಳು ಕೊಂಚ ಭಿನ್ನವಾಗಿಯೇ ಇವೆ. ಇದರಲ್ಲಿ ತಮ್ಮ ಅಂಕಿತವನ್ನು ಭಗವಂತನಿಗೆ ಅನ್ವಯಿಸದೆ 'ಸ್ವನಾಮಮುದ್ರೆ'ಯನ್ನಾಗಿ ಬಳಸಿದ್ದಾರೆ. ಆದ್ದರಿಂದ ರಾಮನನ್ನು ಇಲ್ಲಿ ಪದ್ಮನಾಭ ಪೂಜಿತ, ಪದ್ಮನಾಭಕರ ಪೂಜಿತ, ಪದ್ಮನಾಭ ಪೋಷಕ, ಪದ್ಮನಾಭ ಪೋಷಣಕೃತಾದರ, ಶ್ರಿತಪದ್ಮನಾಭನುತ ಎಂದೆಲ್ಲ ಕರೆದಿದ್ದಾರೆ. ಇದರಲ್ಲಿ ಸಾಕೇತಾಧಿಪಂ (ಶುದ್ಧವೇಳಾವಳಿ), ಶ್ರೀರಾಮಂ ಪ್ರಣಮಾಮಿ (ಕಲ್ಯಾಣಿ), ಕಲಯಾಮಿ (ಸಿಂಧುಮಂದಾರಿ) ಕೃತಿಗಳು ಮಧ್ಯಮ ಕಾಲದ ಕೃತಿಗಳಾಗಿದ್ದರೆ ಮನಸಾ ಸ್ಮರಾಮಿ (ಕಾಂಭೋಜಿ), ಶ್ರೀಕರರಘುವರ (ಕಾನಡ) ಕೃತಿಗಳು ವಿಳಂಬಕಾಲದಲ್ಲಿವೆ.

**ಸಂಪುಟ 3 :**

ಈ ಸಂಪುಟದಲ್ಲಿ 8 ತೆಲುಗು ಕೃತಿಗಳಿವೆ. ಇವುಗಳ ಸ್ಥೂಲ ವೈಶಿಷ್ಟ್ಯವೆಂದರೆ ಎಲ್ಲ ಕೃತಿಗಳು ಸಂವಾದದ ಶೈಲಿಯಲ್ಲಿರುವುದು. ವಾದಮುಲೇಲನೇ (ವಾದವೇತಕ್ಕೆ ಮಾಡುತ್ತೀ), ಮರವತಗುನಾ (ಮರೆಯುವುದು ಸರಿಯೇ?), ಚಲ್ಲಗ ವರ್ಧಿಲ್ಲುಮನಿಚಪ್ಪವಮ್ಮಾ (ತಣ್ಣಗೆ ಬದುಕೆಂದು ಹೇಳಮ್ಮಾ) ಈ ರೀತಿ ನೇರವಾದ ಸಂವಾದಗಳು ಹೇರಳವಾಗಿ ಸಿಗುತ್ತವೆ. ಈ ಸಂಪುಟದಲ್ಲಿನ ನಾತರಮಾ (ಶ್ರೀರಂಜಿನಿ) ಸಾಗರಕುಮಾರೀ (ಬಹುದಾರಿ), ಕೃಪಜೂಚುಟಕು (ಸಾರಂಗ) ಕೃತಿಗಳು ಕೆಲವು ಘಟನೆಗಳ ಮೇಲೆ ಆಧಾರಿತವಾಗಿ ರಚಿತವಾಗಿವೆ. ಕೃತಿರಚನೆಗೆ ಸ್ಫೂರ್ತಿನೀಡಿದ ಆ ಘಟನೆಗಳನ್ನು 'ನಾಂದಿ'ಯಲ್ಲಿ ಪೂರ್ಣವಾಗಿ ವಿವರಿಸಲಾಗಿದೆ.

**ಸಂಪುಟ 4 :**

ಈ ಭಾಗದಲ್ಲಿ 3 ಜಾವಳಿಗಳಿವೆ. ಅದರಲ್ಲಿ 2 ತೆಲುಗಿನಲ್ಲಿದ್ದರೆ ಒಂದು ಕನ್ನಡದಲ್ಲಿದೆ. ಮೂರೂ ಜಾವಳಿಗಳು ನಾಯಿಕಾ ಭಾವದಿಂದ ರಚಿತವಾಗಿರುವಂಥವು. ಸುರುಟಿ ರಾಗದ 'ವದ್ದಂಟೆ ಕೋಪಮಾ' ಎಂಬ ಜಾವಳಿಯು ಶೃಂಗಾರ-ಹಾಸ್ಯರಸೋದ್ದೀಪಕವಾದ ಸಾಹಿತ್ಯವನ್ನು ಒಳಗೊಂಡಿದೆ. ಕಮಾಚ್ ರಾಗದ 'ಸಾಮಿನಿನ್ನೇ' ಎಂಬ ಜಾವಳಿಯು ಆಶ್ರಯದಾತರಾದ ಚಾಮರಾಜ ಒಡೆಯರನ್ನೇ ನಾಯಕರನ್ನಾಗಿ ಮಾಡಿ ರಚಿಸಿರುವ ರಚನೆ. ಇಲ್ಲಿ ಸಖ್ಯಭಾವಕ್ಕಿಂತ ದಾಸ್ಯಭಾವವೇ ಹೆಚ್ಚು ! ಈ ರಚನೆಯ ತಾಳವನ್ನು ಹಸ್ತಪ್ರತಿಯಲ್ಲಿ ರೂಪಕವೆಂದಿದ್ದರೂ ಇದು 'ಉತ್ಸಾಹಲಯ'ದಲ್ಲಿರುವುದರಿಂದ 'ತಿಶ್ರಛಾಪು'ವಿನಲ್ಲೇ ಹೆಚ್ಚಾಗಿ ಬಳಕೆಯಲ್ಲಿದೆ. ಕಡೆಯ ಜಾವಳಿಯೊಂದಾದರೂ ಕನ್ನಡದಲ್ಲಿದೆಯೆಂದುಕೊಂಡರೂ ಇಲ್ಲಿ ವ್ಯಕ್ತವಾಗಿರುವ ಶೃಂಗಾರವು ತೀರಾ ವಾಚ್ಯ. ಈ ಜಾವಳಿಯಲ್ಲಿ ವಾಗ್ಗೇಯಕಾರನ 'ಪದ್ಮನಾಭ' ಎಂಬ ಅಂಕಿತವು 'ಬಿಸುಜಪೊಕ್ಕುಳ' ಎಂದು ನವೀನವಾಗಿ ಪ್ರಯೋಗವಾಗಿದೆ.

**ಶೈಲಿ :**

ಪದ್ಮನಾಭಯ್ಯನವರು ಸ್ವತಃ ವಾದಕರೂ ಬೋಧಕರೂ ಆಗಿದ್ದರಿಂದಾಗಿ ಹತ್ತು ಹಲವು ವಾಗ್ಗೇಯಕಾರರ ಕೃತಿಗಳನ್ನು ಅಭ್ಯಾಸ ಮಾಡಿ ಕರತಲಾಮಲಕ ಮಾಡಿಕೊಂಡಿದ್ದವರು. ಆದರೂ ಶ್ರೀ ತ್ಯಾಗರಾಜರ ಕೃತಿಗಳ ಮೇಲೆ ಇವರದು ವಿಶೇಷ ವಾಂಛೆ. ಆದ್ದರಿಂದಲೋ ಏನೋ ತ್ಯಾಗರಾಜರ ಹಲವು ಕೃತಿಗಳಂತೆ ಇವರ ಕೃತಿಗಳೂ ಚರಣದ ಉತ್ತರಾರ್ಧದ ಸಾಹಿತ್ಯವು ಅನುಪಲ್ಲವಿಯ ಧಾತುವಿಗೇ ಅಳವಡುವಂತೆ ರಚಿತವಾಗಿವೆ. 'ನಿಂದಾಸ್ತುತಿ'ಗಳಲ್ಲಿ ಹರಿದಾಸರ ಪ್ರಭಾವವು ಕಂಡುಬಂದರೆ, ಪ್ರಾಸಗಳಲ್ಲಿ ದೀಕ್ಷಿತರನ್ನೂ ಈ ರಚನೆಗಳು ಹೋಲುತ್ತವೆ. ದೀನದಯಾಕರ ಕೃತಿಯಲ್ಲಿನ 'ನೀರಜನಾಭ ಪರಿಪಾಲಿತೇಭ'ವೆಂಬ ಪ್ರಯೋಗವು ಥಟ್ಟನೆ ಸ್ವಾತಿ ತಿರುನಾಳರನ್ನು ನೆನಪಿಸುತ್ತದೆ. ಇವರ ಧಾತುಸಂಯೋಜನೆಯು ಅತಿ ಕ್ಲಿಷ್ಟವಲ್ಲದಿದ್ದರೂ ಸರಳವೇನಲ್ಲ. ಕೆಲವೊಮ್ಮೆ ಚತುರಶ್ರನಡೆಗೆ ಸಹಕಾರಿಯಾದ ನಾಲ್ಕು ಮಾತ್ರೆಗಳ ಸ್ವರಪುಂಜಗಳು ಶ್ರೀಹೇರಂಬಮೀಡೇ ಕೃತಿಯಲ್ಲಿ ಕೆಲವೆಡೆಯಲ್ಲೂ, ಮನಸಾ ಸ್ಮರಾಮಿ ಎಂಬ ಕಾಂಭೋಜಿಯ ಕೃತಿಯಲ್ಲಿ ಹೇರಳವಾಗಿಯೂ ಇದೆ. ಪದ್ಮನಾಭಯ್ಯನವರ

ಈ ಕಾಂಭೋಜಿಯ ಶೈಲಿಯನ್ನು ಅವರ ಶಿಷ್ಯ ಮೈಸೂರು ವಾಸುದೇವಾಚಾರ್ಯರು ತಮ್ಮ 'ಮರಿಮರಿವಚ್ಚುನಾ' ಎಂಬ ಕಾಂಭೋಜಿಯ ಕೃತಿಯಲ್ಲಿ ಬಳಸಿರುವುದನ್ನು ನಾವು ಕಾಣಬಹುದು.

ಈ ಗ್ರಂಥದಲ್ಲಿನ ಎಲ್ಲ ಕೃತಿಗಳಿಗೆ ಕನ್ನಡದಲ್ಲಿ ಭಾವಾರ್ಥವನ್ನೂ, ಸಂಸ್ಕೃತ, ತಮಿಳುಗಳಲ್ಲಿ ಸಾಹಿತ್ಯ ಭಾಗವನ್ನು ನೀಡಿರುವುದರ ಜೊತೆಗೆ ಅನ್ಯಭಾಷೀಯರು ಈ ಕೃತಿಗಳ 'ಧಾತು' ಸ್ವರೂಪವನ್ನು ತಿಳಿಯುವುದಕ್ಕಾಗಿ ಸಂಸ್ಕೃತ, ತಮಿಳು ಭಾಷೆಗಳಲ್ಲಿ 'ಸ್ವರಪಥಕ'ವನ್ನು ನೀಡಲಾಗುತ್ತಿದೆ. ಪದ್ಮನಾಭಯ್ಯನವರು ನಮ್ಮನ್ನಗಲಿ ನೂರು ವರ್ಷಗಳಾಗುತ್ತಿರುವ ಇಂದಿನ ಸಂದರ್ಭದಲ್ಲಿ ಅವರ ಚಿರಸ್ಮರಣೆಯ ಕುರುಹಾಗಿ ಹೊರಬೀಳುತ್ತಿರುವ ಈ ಗ್ರಂಥಕ್ಕೆ ಮಹಾಮಹೋಪಾಧ್ಯಾಯ ಡಾ|| ರಾ. ಸತ್ಯನಾರಾಯಣರವರು ಮೌಲಿಕವಾದ ಮುನ್ನುಡಿಯನ್ನು ಬರೆದಿದ್ದಾರೆ.

ಈ ಸಂಕಲನದಲ್ಲಿರುವ ಪದ್ಮನಾಭಯ್ಯನವರ ರಚನೆಗಳು ಒಟ್ಟು ಮೂವತ್ತು. ಹಲವು ವಿದ್ವಾಂಸರುಗಳು ಪದ್ಮನಾಭಯ್ಯನವರ ಇನ್ನೂ ಹಲವು ರಚನೆಗಳಿತ್ತೆಂದು ಹೇಳುವರಾದರೂ ಅದಕ್ಕೇ ಯಾವುದೇ ಸಾಕ್ಷ್ಯ ಪ್ರಾಮಾಣ್ಯಗಳನ್ನೊದಗಿಸಿಲ್ಲ. ಆದರೆ ಅವರ ರಚನೆಗಳು ಈ 30 ಮಾತ್ರ ಎಂಬುದಕ್ಕೆ ನನ್ನಲ್ಲಿನ ಹಸ್ತಪ್ರತಿಗಳಲ್ಲಿ ಸ್ಪಷ್ಟ ದಾಖಲೆ ಇದೆ. ಈ ಕೃತಿಗಳ ಜೊತೆಗೆ ಅವರ ಜೀವನ-ಸಾಧನೆಗಳ ಬಗ್ಗೆ ಇಂದು ನಮಗೆ ಲಭ್ಯವಿರುವ ಅಶೇಷ ಮಾಹಿತಿಗಳನ್ನು ಕ್ರೋಢೀಕರಿಸಿ ನೀಡಲಾಗುತ್ತಿದೆ. ಆದ್ದರಿಂದಲೇ ಈ ಗ್ರಂಥಕ್ಕೆ 'ಅಶೇಷ ಪದ್ಮನಾಭ ಸಂಪುಟ' ಎಂದು ಕರೆಯುವ ಧೈರ್ಯ ಮಾಡಲಾಗುತ್ತಿದೆ. ಹಾಗೇನಾದರೂ ಭವಿಷ್ಯದಲ್ಲಿ ಅವರ ಇನ್ನೂ ಹಲವು ಕೃತಿಗಳು ದೊರೆತು ಅವು ಪದ್ಮನಾಭಯ್ಯನವರದ್ದೇ ಎಂದು ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳಿಂದ ಸಾಬೀತಾದ ಪಕ್ಷದಲ್ಲಿ ಅದು 'ವಿಶೇಷ ಪದ್ಮನಾಭ ಸಂಪುಟ'ವಾದೀತು. ಒಟ್ಟಿನಲ್ಲಿ ಇಂದಿನ ಮಟ್ಟಿಗೆ ಇದು 'ಅಶೇಷ ಪದ್ಮನಾಭ ಸಂಪುಟ'.

---

***ಸಂಗೀತ ಸರಿತಾ*** *(10ನೇ ಪುಟದಿಂದ)*

ಕೃಷ್ಣಪ್ಪನವರೂ ತಾತನವರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು! ಆಗ ತಾನೇ ಭೈರವೀ ರಾಗಾಲಾಪನೆಯನ್ನು ಮುಗಿಸಿ ಪಲ್ಲವಿಯನ್ನು ಎತ್ತಿಕೊಳ್ಳುವ ಯೋಚನೆಯಲ್ಲಿದ್ದರು ಕೃಷ್ಣಪ್ಪ. ''ದಯಮಾಡಿಸಿ ಆಚಾರ್ಯರೇ ತಾವೂ ಸ್ವಲ್ಪ ರಾಗಾಲಾಪನೆ ಮಾಡಿ. ಆ ಬಳಿಕ ಯಾವುದಾದರೊಂದು ಪಲ್ಲವಿಯನ್ನು ಹಾಡಿ ಮುಗಿಸೋಣ'' ಎಂದರು.

ಅಖಾಡಕ್ಕೆ ಇಳಿದರು ತಾತ! ರಾಗಾಲಾಪನೆ ಮಾಡಿದ್ದೂ ಆಯಿತು. ಮುಂದೆ? ಯಾವ ಪಲ್ಲವಿಯನ್ನು ಎತ್ತಿದರೆ ಯಾರಿಗೆ ಹೇಗೋ! ''ಪ್ರಾರಂಭ ಮಾಡಿದವರು ನೀವು. ಯಾವ ಪಲ್ಲವಿಯನ್ನು ಹಾಡಬೇಕೆಂದು ಉದ್ದೇಶಿಸಿದ್ದಿರೋ ಅದನ್ನೇ ಪ್ರಾರಂಭ ಮಾಡಿ'' ಎಂದರು ತಾತ. ''ಮಾ ಮಧುರೆ ಮೀನಾಕ್ಷಿ'' ಎಂಬ ಪಲ್ಲವಿಯನ್ನು ಎತ್ತಿದರು ಕೃಷ್ಣಪ್ಪ. ಇಬ್ಬರೂ ನೆರವಲು ಮಾಡಿ, ಸ್ವರ ಪ್ರಸ್ತಾರ ಮಾಡಿ ಕಛೇರಿಯನ್ನು ಮುಗಿಸಿದರು.

''ಏನು ಜನ ಆಚಾರ್ಯರೇ! ನಾವೇನೋ ಒಬ್ಬರನ್ನೊಬ್ಬರು ಅರಿತುಕೊಂಡಿದ್ದೆವು. ಯಾವ ಸವಾಲನ್ನೇ ಆಗಲಿ ಎದುರಿಸುವ ಧೈರ್ಯ ಸಾಮರ್ಥ್ಯಗಳನ್ನು ದೇವರು ನಮಗೆ ಕರುಣಿಸಿದ್ದಾನೆ. ಆದುದರಿಂದ ಯಾವ ಆಭಾಸಕ್ಕೂ ಅವಕಾಶವಾಗಲಿಲ್ಲ, ಇಲ್ಲದಿದ್ದರೆ ಗತಿ?'' ಎಂದರಂತೆ ಕೃಷ್ಣಪ್ಪ. ''ಮರೆಯಲಾಗದ ಅನುಭವಗಳಲ್ಲಿ ಇದು ಒಂದು'' ಎಂದು ನಕ್ಕರಂತೆ ತಾತ!

ಅಂತಃಸ್ಫೂರ್ತಿ ಜೀವಿಗಳಾದ ಕಲಾವ್ಯಾಸಂಗಿಗಳ ಮನಸ್ಸು ಹೇಗೆ ಹೇಗೆ ಹಾರಾಡುತ್ತದೆ; ಲೋಕದ ಚೇಷ್ಟೆಗಳಿಗೆ ಅವರ ಸ್ವಭಾವ ಹೇಗೆ ಪ್ರತಿ ಚೇಷ್ಟೆ ಮಾಡುತ್ತದೆ, ನೋಡಿದೆಯಾ ಕುಸುಮ? ಸಂಗೀತ ಸ್ಪರ್ಧೆಗಳನ್ನು ಕುರಿತ ಕತೆ ಇಲ್ಲಿಗೆ ಸಾಕು. ಈ ಎಲ್ಲ ಹಿರಿಯ ಸಂಗೀತ ತಪಸ್ವಿಗಳ ಅನುಗ್ರಹ ನಿನಗೆ ಸದಾ ರಕ್ಷಣೆಯಾಗಿರಲಿ. ಅವರ ಛಲ, ಅವರ ಕಠಿಣ ತಪಸ್ಸು ನಿನಗೆ ಮಾರ್ಗದರ್ಶಕವಾಗಿರಲಿ. ಅವರ ಆಶೀರ್ವಾದದಿಂದ ಸಂಗೀತಶ್ರೀ ನಿನಗೊಲಿಯಲಿ.

ಕೃಪೆ : ಕನ್ನಡ ಸಾಹಿತ್ಯ ಪರಿಷತ್ತು



ಅನನ್ಯ

91/2, 4ನೇ ಮುಖ್ಯರಸ್ತೆ,
ಮಲ್ಲೇಶ್ವರ, ಬೆಂಗಳೂರು-560 003.

ಅನನ್ಯ

# ANANYA PROGRAMMES FOR MAY-1999

## ANANYA SANGEETOTSAVA

### ON SATURDAY, 22.5.99

6.00 p.m. **INAUGURATION by**
**Sri N.S. Krishna Murthy**

6.30 p.m. **VOCAL RECITAL by**
**Vidhushi M.S. Sheela**
accompanied by
**Vidhushi Nalina Mohan** (Violin)
**Vidwan Anoor Anantha Krishna Sharma** (Mridanga)
**Vidhushi Sukanya Ramagopal** (Ghata)

### ON SUNDAY, 23.5.99

4.00 p.m. **PANEL DISCUSSION on**
**"KISHORA PRATHIBHA VIKASANA"**
Presided by **Vidwan A. Veerabhadraiah**
Panel : **Sri S. Krishna Murthy**
**Sri N.S. Krishna Murthy**
**Vidhushi T. Sharada**
**Smt. Vimala Rangachar**

Prize Distribution to Quiz Winners conducted by ANANYA

I Prize : Ms. Manasi Prasad & Mr. Sampath Kumar
II Prize : Mr. Praveen & Mr. Suchetan
III Prize : Ms. Shrimata & Mr. Adamya

6.30 p.m. : **FLUTE RECITAL by**
**Vidwan V. Deshikachar**
accompanied by
**Vidwan S. Sheshagiri** (Violin)
**Vidwan M.S. Ramaiah** (Mridanga)
**Vidwan Sosale Sheshagiri Das** (Khanjari)

at ***ANANYA SABHANGANA***

***All are Welcome***

***Please park your vehicles outside the gate***

Published by : ANANYA, GML CULTURAL ACADEMY, 91/2, 4th Main, Malleswaram, Bangalore-560 003. Phone : 3345069. Printed by : Akshara Printers, Basavanagudi, Bangalore-560 004. Phone : 624082, 624897.